# ಗುಲಬರ್ಗಾ ಕನ್ನಡದಲ್ಲಿ ಸ್ವೀಕರಣ ಪದಗಳು

## (ಮರಾಠಿ ಮತ್ತು ಉರ್ದು)

# Borrowing's Words in Gulbarga Kannada

## (Marathi and Urdu)

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಸಂಪ್ರಬಂಧ)

ಸಂಶೋಧಕರು

ರವೀಂದ್ರ

ಮಾರ್ಗದರ್ಶಕರು

ಡಾ. ಪಿ. ಮಹಾದೇವಯ್ಯ

ಸಹಪ್ರಾಧ್ಯಾಪಕರು



ಕನ್ನಡ ಭಾಷಾಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ 583 276

2013

# ಗುಲಬರ್ಗಾ ಕನ್ನಡದಲ್ಲಿ ಸ್ವೀಕರಣ ಪದಗಳು

## (ಮರಾಠಿ ಮತ್ತು ಉರ್ದು)

# Borrowing Words in Gulbarga Kannada

## (Marathi and Urdu)

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಸಂಪ್ರಬಂಧ)

ಸಂಶೋಧಕರು

**ರವೀಂದ್ರ**

ಮಾರ್ಗದರ್ಶಕರು

**ಡಾ. ಪಿ. ಮಹಾದೇವಯ್ಯ**

ಸಹಪ್ರಾಧ್ಯಾಪಕರು



ಕನ್ನಡ ಭಾಷಾಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೩

# ದೃಢೀಕರಣ ಪತ್ರ

ಶ್ರೀ ರವೀಂದ್ರ ಅವರು ಗುಲಬರ್ಗಾ ಕನ್ನಡದಲ್ಲಿ ಸ್ವೀಕರಣ ಪದಗಳು (ಮರಾಠಿ ಮತ್ತು ಉರ್ದು) ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಭಾಗಶಃ ಆಗಲಿ ಪೂರ್ಣವಾಗಿಯಾಗಲಿ ಬೇರಾವುದೇ ಡಿಪ್ಲೊಮ ಅಥವಾ ಪದವಿಗಾಗಿ ಒಪ್ಪಿಸಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ : ೨೦.೨.೧೨
ಸ್ಥಳ : ವಿದ್ಯಾರಣ್ಯ

(ಡಾ. ಪಿ. ಮಹಾದೇವಯ್ಯ)
ಸಹಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

**ಗುಲಬರ್ಗಾ ಕನ್ನಡದಲ್ಲಿ ಸ್ವೀಕರಣ ಪದಗಳು** (ಮರಾಠಿ ಮತ್ತು ಉರ್ದು) ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಸಲ್ಲಿಸಲು **ಡಾ. ಪಿ. ಮಹಾದೇವಯ್ಯ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ. ಈ ಸಂಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಇಲ್ಲವೆ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : ೨೦-೦೨-೦೨
ಸ್ಥಳ : ವಿದ್ಯಾರಣ್ಯ

(ರವೀಂದ್ರ)
ಸಂಶೋಧನ ವಿದ್ಯಾರ್ಥಿ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ, ಮಹತ್ವ ಮತ್ತು ವೈಧಾನಿಕತೆ

**ಭಾ**ಷೆ ನಿರಂತರ ಪರಿವರ್ತನಶೀಲವಾದದ್ದು, ಬೆಳೆಯುತ್ತಿರುವುದು, ಮಾರ್ಪಾಡಾಗುತ್ತಿರುವುದೆ ಜೀವಂತ ಭಾಷೆಯ ಲಕ್ಷಣ. ಹಂಬೋಲ್ಟ್ ಎಂಬ ಭಾಷಾ ವಿಜ್ಞಾನಿ ದೃಷ್ಟಿಯಲ್ಲಿ ಹೇಳುವದಾದರೆ "Language is not a substance of finished work but action. and It is the ever-repeated labor of the mind to utilize articulated sounds to express thoughts" –ಎಂದು ಹೇಳುತ್ತಾನೆ. ಇದನ್ನೆ ಭಾಷೆಯ ಬೆಳವಣಿಗೆ ಇಲ್ಲವೆ ಮಾರ್ಪಾಡು ಎಂದು ಕರೆಯುತ್ತಾರೆ. ಯಾವುದಾದರೊಂದು ರಾಜಕೀಯ ಇಲ್ಲವೆ ಸಾಮಾಜಿಕ ಕ್ರಾಂತಿಯಾದಾಗಾಗಲೀ, ಇಲ್ಲವೆ ಯಾವುದೇ ರೀತಿಯಿಂದ ಅನ್ಯಭಾಷೆಯ ಸಂಪರ್ಕವೊದಗಿದಾಗಾಗಲಿ, ಇಂಥ ಮಾರ್ಪಾಡಿನ ವೇಗವು ಸ್ವಲ್ಪ ಹೆಚ್ಚಾಗುತ್ತದೆ. ಭಾಷೆ ಬೆಳೆಯಲು ಕಾರಣಗಳು ಹೇರಳವಾಗಿ ದೊರೆಯುತ್ತವೆ. ಭಾಷೆಯ ಬೆಳವಣಿಗೆಯ ಪ್ರಗತಿ ನಾನಾ ತೆರ ಅವುಗಳಲ್ಲಿ ಕೋಶಾಭಿವೃದ್ಧಿಯು ಒಂದು. ಕೋಶಾಭಿವೃದ್ದಿಯಾಗಬೇಕಾದರೆ ಹೊಸ ಹೊಸ ಶಬ್ದಗಳ ಸೃಷ್ಠಿಯಿಂದ ಮಾತ್ರ ಸಾಧ್ಯ. ಇಲ್ಲವಾದರೆ ಅವಶ್ಯಕತೆ ಪೂರೈಕೆಗೆ ಸ್ವೀಕರಣ ಅನವಾರ್ಯವಾಗುತದೆ. "ಭಾಷೆಯಲ್ಲಾಗುವ ಬೆಳವಣಿಗೆಯನ್ನು ನಾವು ಸ್ಥೂಲವಾಗಿ ಮೂರು ವಿಧವಾಗಿ ವಿಭಾಗಿಸಬಹುದು. ಒಂದು, ಸಾಕೂತ ಪ್ರಯತ್ನದ ಮೂಲಕ ಮಾಡಿಕೊಂಡ ಮಾರ್ಪಾಡು ಇಲ್ಲವೆ ಬೆಳವಣಿಗೆಗಳು, ಎರಡು, ನಾವು ಅರಿಯದೆಯೆ ನಡೆದಿರುವ ಪ್ರಕ್ರಿಯೆಗಳು. ಮೂರನೆಯದಾಗಿ, ಅನ್ಯಭಾಷೆ ಇಲ್ಲವೆ ಅನ್ಯ ಸಂಸ್ಕೃತಿಯ ಸಂಪರ್ಕದ ಮೂಲಕವಾಗಿ ಬಂದ ಹೊಸ ಶಬ್ದಗಳು" (ಧಾರವಾಡಕರ. ರಾ.ಯ. ೧೯೫೮).

"every speech community learn from its neighbors" (ಬ್ಲೂಮ್‌ಫೀಲ್ಡ್, ೪೪೫/೧೯೬೩ (ಉದೃತ) ಶಿವಾನಂದ ವಿ. ೧೯೮೧) ಬ್ಲೂಮ್ ಫೀಲ್ಡ್‌ರ ಈ ಮಾತು ನೂರರಷ್ಟು ಸತ್ಯ ನಾವು

ನಮ್ಮ ನೆರೆ ಹೊರೆಯವರಿಂದ ಅನೇಕ ವಿಷಯಗಳನ್ನು ಕಲಿತುಕೊಳ್ಳುತ್ತೇವೆ. ಹೀಗೆ ಕಲಿತು ಅಥವಾ ಅರಿತುಕೊಳ್ಳುವಾಗ ಅವರ ಪ್ರಭಾವದಿಂದ ಅವರ ಸಂಸ್ಕೃತಿ, ವ್ಯವಹಾರ ಕ್ರಮ, ನಡಾವಳಿಕೆ, ಭಾಷೆ ಇತ್ಯಾದಿಗಳನ್ನು ನಮಗರಿವಿಲ್ಲದೆಯೆ ಅಥವಾ ಪ್ರಜ್ಞಾಪೂರ್ವಕವಾಗಿಯೇ ಬಳಸಿಕೊಳ್ಳುತ್ತೇವೆ. ಅವು ಕ್ರಮೇಣ ನಮ್ಮ ದಿನ ನಿತ್ಯದ ಬಳಕೆಗೂ ಬಂದು ಬಿಡತ್ತವೆ.

ಪ್ರತಿಯೊಂದು ಜೀವಂತ ಭಾಷೆಯಲ್ಲಿ ಒಂದು ಸ್ವಭಾಷಾ ಶಬ್ದಭಂಡಾರ ಮತ್ತು ಸ್ವೀಕೃತ (ಅನ್ಯ ಭಾಷಾ) ಶಬ್ದ ಭಂಢಾರವಿರುತ್ತದೆ. ಅದಕ್ಕೆ ಓಟ್ ಜೆಸ್ಪರ್‌ಸನ್ ಹೇಳುವದು "no language is entirely free form borrowed words because no nation has ever been completely isolated". ಇದಕ್ಕೆ ಕಾರಣವು ಇಲ್ಲದಿಲ್ಲ. ಎಕೆಂದರೆ ಭಾಷೆ, ಸಂಸ್ಕೃತಿ, ಧಾರ್ಮಿಕತೆಗಳು ಮನುಕುಲದ ಸಹಬಾಳ್ವೆಗೆ ಅನುಕುಲವಾಗಲು ಸೃಷ್ಟಿಯಾದವುಗಳು. ಒಂದು ವೇಳೆ ಪರಸ್ಪರ ಭಾಷಿಕರ ಸಂಪರ್ಕ ವಿಲ್ಲದಿದ್ದಾಗ ಒಳನುಡಿಗಳು ಹುಟ್ಟಿಕೊಳ್ಳುತ್ತವೆ. ಅದೆ ಪರಸ್ಪರ ಇತರ ಅನ್ಯ ಭಾಷಿಕರೋಂದಿಗಿನ ಭಾಷಾ ಸಂಪರ್ಕದಿಂದ ಭಾಷಾ ಬಾಂಧವ್ಯಾ ಬೆಳೆದು ಭಾಷಾ ಸ್ವೀಕರಣ ನಡೆಯುತ್ತದೆ. ಇದು ಕೆಲವೊಮ್ಮೆ ಅವಶ್ಯಕತಗನುಗುಣವಾಗಿ ಬರುತ್ತದೆ. ಮತ್ತು ಕೆಲವೊಮ್ಮೆ ಪ್ರಭಾವದಿಂದ. ಇನ್ನು ಮುಂದುವರಿದು ಹೇಳುವುದಾದರೆ ಕೆಲವೊಮ್ಮೆ ಪ್ರಭುತ್ವದ ಹೇರಿಕೆಯಿಂದಲೂ ಶಬ್ದ ಸ್ವೀಕರಣೆ ನಡೆಯುತ್ತದೆ. ಇಂದು ಆಧುನಿಕ ವಿಜ್ಞಾನದ ಅನೇಕ ಹೊಸ ಅನ್ವೇಷಣೆಯಿಂದ ವಿಶ್ವಮಾನವರು ತುಂಬಾ ಸನಿಹರಾಗಿದ್ದಾರೆ. ಇಂಥ ಸಂದರ್ಭದಲ್ಲಿ ಸ್ವೀಕರಣ ಸಾಮಾನ್ಯ .

ಸ್ವೀಕರಣ ಪ್ರಕ್ರಿಯೆಯು ಭಾಷೆ ಭಾಷೆಗಳ ನಡುವೆ ಮತ್ತು ಭಾಷೆ ಉಪ ಭಾಷೆಗಳ ನಡುವೆ ನಡೆಯುತ್ತದೆ. ಕ್ರಮವಾಗಿ ಇದನ್ನ ಸಾಂಸ್ಕೃತಿಕ ಸ್ವೀಕರಣ ಮತ್ತು ಉಪ ಭಾಷಾ ಸ್ವೀಕರಣ ಎಂದು ಕರೆಯುತ್ತೇವೆ. ಈ ಪ್ರಕ್ರಿಯೆಯು ಅವಶ್ಯಕತೆಗನುಗುಣವಾಗಿ(need filling) ನಡೆಯುವಂತದ್ದು. ಆದರೆ ಜೆಸ್ಪರ್‌ಸನ್ Necessity is not always reason for borrowing ಎನ್ನುತ್ತಾನೆ. ಇದಕ್ಕೆ ಅವನು "when a nation has once got into the habit of borrowing words, people will very often of use foreign words where it could have been perfectly possible to express their idea by means of native speech materials, the reason for going out of one's own language being in some cases the desire to be thought fashionable or refined through inter larding ones speech with foreign words in other simply laziness, as is very often the case when people are rendering thought they have heard or read in a foreign tongue"(ಕೆದಿಲಾಯ, ೧೯೭೦, ೬)ಇಂತಾ ಕಾರಣಗಳಿಂದಾಗಿ ಒಂದು ಭಾಷಾ ಸಮುದಾಯ ಸ್ವೀಕರಣ ಮಾಡಿಕೊಳ್ಳುತ್ತದೆ ಎನ್ನುತ್ತಾನೆ.

ಭೌಗೋಳಿಕವಾಗಿ ಗಡಿ ಪ್ರದೇಶದಲ್ಲಿರುವ ಭಾಷಿಕ ಸಮುದಾಯಗಳು ದ್ವಿಭಾಷಿಕತೆಯ ಪರಿಸ್ಥಿತಿ ಎದುರಿಸುತ್ತವೆ. ತನ್ನ ದೈನಂದಿನ ವ್ಯವಹಾರ ಅನ್ಯಭಾಷಿಕರೊಂದಿಗೆ ಮಾಡಬೇಕಾದಾಗ ಅವರಿಗೆ

ಹೇಳಬಯಸುವ ಮಾಹಿತಿಯನ್ನು ಅರ್ಥೈಸಲು ಅವರ ಭಾಷೆಯ ಪದಗಳನ್ನು ಬಳಸುವುದು ಅನಿವಾರ್ಯವಾಗಿರುತ್ತದೆ. ಇಂಥ ಸಂದರ್ಭಗಳೇ ರೂಢಿಯಾಗಿ ಸ್ವಭಾಷಿಕರೊಂದಿಗೆ ಮಾತನಾಡುವಾಗಲು ಅ ಪದಗಳು ಬಳಕೆಗೆ ಬರುತ್ತವೆ. ಮತ್ತು ಒಂದು ಭಾಷಿಕ ಸಮುದಾಯವು ಯಾವುದೊ ಒಂದು ಅನ್ಯ ಪ್ರಭುತ್ವದ ಆಡಳಿತಕ್ಕೊಳಗಾದಾಗ ಅವರಿಬ್ಬರ ಭಾಷೆಗಳು ಭಿನ್ನವಾಗಿದ್ದಾಗ ಪ್ರಜೆ, ಭಾಷಾ ಹೇರಿಕೆಗೆ ಒಳಗಾಗಿಯೋ ಇಲ್ಲಾ ಅವನ ಅವಶ್ಯಕತೆಗಾಗೋ ಪ್ರಭುತ್ವದ ಭಾಷೆಯನ್ನು ಅನುಸರಿಸಬೇಕಾಗುತ್ತದೆ. ಆಗ ಸ್ವೀಕರಣ ಅನಿವಾರ್ಯವಾಗುತ್ತದೆ. ಹಾಗೆಯೇ ಪ್ರಭುತ್ವವು ಕೂಡಾ ತನ್ನ ಅಡಳಿತದ ಅನಕೂಲತೆಗಾಗಿ ಪ್ರಜೆಗಳ ಭಾಷೆಯಿಂದ ಸ್ವೀಕರಣ ಮಾಡಿಕೊಳ್ಳುವ ಸಾಧ್ಯತೆಗಳು ಇರುತ್ತವೆ(ಇಗ್ಲಿಷ್‌ರು-ಭಾರತಿಯ ಭಾಷೆಗಳು). ಇದಲ್ಲದೆ ನಾವು ಒಂದು ಅನ್ಯ ಸಂಸ್ಕೃತಿ ಪರಿಸರದಿಂದ ಒಂದು ವಸ್ತು, ವಿಷಯವನ್ನು ಸ್ವೀಕರಿಸಿದ್ದೇವೆಂದರೆ ಆ ವಸ್ತುವಿನ, ವಿಷಯದ ಹೆಸರು, ಅಲ್ಲಿ ಬಳಕೆಗೊಳ್ಳುವ ಪಾರಿಭಾಷಿಕ ಪದಗಳು ಸ್ವೀಕರಿಸಿದ ಭಾಷಿಕ ಪರಿಸರಕ್ಕೆ ಬಂದು ಬಿಡುತ್ತವೆ(linguistic-ಕನ್ನಡದ ಬಾಷಾವಿಜ್ಞಾನ). ಕೆಲವೊಮ್ಮೆ ಆ ಪದಗಳಿಗೆ ಪರ್ಯಾಯವಾಗಿ ಬೇರೆ ಪದಗಳನ್ನು ಸೃಷ್ಟಿಸಿಕೊಂಡು ಬಳಕೆಗೆ ತರಬಹುದು(train–ಉಗಿಬಂಡಿ). ಕೆಲವು ಸ್ವೀಕೃತ ಶಬ್ದಕ್ಕೆ ಸ್ವೀಕರಿಸಿದ ಭಾಷೆಯಲ್ಲಿ ವಿಕೃತ ರೂಪವೊಂದು, ಭಾಷಾಂತರದ ಶಬ್ದವಿನ್ನೊಂದು ಹೀಗೆ ಎರಡೆರಡು ಸಮಾನಾರ್ಥಕ ಶಬ್ದಗಳು ಬಳಕೆಯಲ್ಲಿರುವದುಂಟು. ಇದು ಮೂಲಾರ್ಥಬಲ್ಲವರಿಗೆ ಮಾನ್ಯವಾಗದಿರಬಹುದು. ಆ ಮೂಲಾರ್ಥದಿಂದ ದೂರವಿದ್ದವರಿಗೆ ಅಥವಾ ಸರಿಯಾದ ರೂಪ ಗೊತ್ತಿರದವರಿಗೆ ಮಾನ್ಯವಾಗಿ ಬಳಕೆಯಲ್ಲಿರುತದೆ. ಉದಾಹರಣೆಗೆ ಎನ್ನುವದು ಪರಮೇಶ್ವರಿ ನೋಟು ಆಗಿ ಬಳಕೆಗೊಳ್ಳುವಾಗ ಕೆಲವೊಂದು ಅರ್ಥ ಪ್ರತಿತಿಯಾಗುತ್ತಿರಬಹುದು. ಆದರೆ ಮೂಲಾರ್ಥ ಮಾತ್ರ ಏನು ವ್ಯಕ್ತವಾಗಿಲ್ಲ ಆದುದರಿಂದ ನಿಜವಾದ ಅರ್ಥವು ಸ್ಪುರಿಸುವಂತೆ, 'ಆಶ್ವಾಸನಾ ಪತ್ರ' ಎಂಬುದಾಗಿ ಇನ್ನೊಂದು ಪ್ರತಿ ಶಬ್ದ ವ್ಯವಹಾರದಲ್ಲಿ ಕಲ್ಪಿಸಿಕೊಳ್ಳಬೇಕಾಗುತ್ತದೆ. ಕೆಲವು ಸ್ವೀಕೃತ ಶಬ್ದಕ್ಕೆ ಮಾತಿನಲ್ಲಿ ಸಮಾನಾರ್ಥಕ ಶಬ್ದಗಳು ಒಂದಕಿಂತ ಹೆಚ್ಚಾದ ಕೂಡಲೇ ಅವುಗಳಲ್ಲಿ ಒಂದೊಂದು ವಿಶಿಷ್ಟಾರ್ಥ ಬರುವದುಂಟು ಅಥವಾ ಅವು ಒಂದೆ ಅರ್ಥಕೊಡುತಿದ್ದರೂ ಪ್ರತಿಯೋಂದಕ್ಕೂ ಒಂದೊಂದು ಸೂಕ್ಷ್ಮಾರ್ಥ ಪ್ರಾಪ್ತವಾಗುವದು. ಉದಾಹರಣೆಗೆ ಕಾಗದ–ಪತ್ರ ಒಂದೆ ಅರ್ಥಹೊಂದಿದ್ದರು, ಎರಡಕ್ಕು ಸೂಕ್ಷ್ಮಾರ್ಥ ಬೇರೆಯೆ ಆಗಿದೆ.

ಒಂದು ಭಾಷೆಯ ಜನಪ್ರಿಯತೆಗೆ ಹೆಚ್ಚು ಆಕರ್ಷಣೆಗೆ ಒಳಗಾಗಿ ನಾವು ಆ ಭಾಷೆಯ ಪದಗಳನ್ನು ನಮ್ಮ ಮಾತಿನಲ್ಲಿ ಬಳಸಿಕೊಳ್ಳಲು ಕಾರಣವಾಗುತ್ತದೆ. ಆ ಪದಗಳು ಸ್ವೀಕರಿಸಿದ ಭಾಷೆಯಲ್ಲಿ ಖಾಯಂ ಆಗಿ ಉಳಿದುಬಿಡಬಹುದು. ಈ ಪ್ರಕ್ರಿಯೆ ಕೆಲವು ಭಾಷೆಗಳಲ್ಲಿ ಹೆಚ್ಚಿರಬಹುದು, ಕೆಲವದರಲ್ಲಿ ಕಡಿಮೆ. ಏಕ ಪಕ್ಷಿಯವಾಗಿರಬಹುದು ಇಲ್ಲಾ ಪರಸ್ಪರ.

## ಕನ್ನಡದಲ್ಲಿ ಸ್ವೀಕರಣ ಪ್ರಕ್ರಿಯೆ

ಕನ್ನಡ ಭಾಷೆಯು ಬೆಳೆದು ಬಂದ ಇತಿಹಾಸ ನೋಡಿದಾಗ ಆರಂಭ ಕಾಲದಿಂದಲೂ ಇದು ಸ್ವೀಕರಣ ಮಾಡಿಕೊಂಡೆ ತನ್ನ ಪದ ಸಂಪತ್ತನ್ನು ಬೆಳೆಸಿಕೊಂಡಿದೆ. ಸಂಸ್ಕೃತ, ಪರ್ಶೊ–ಅರೇಬಿಕ್, ಉರ್ದು, ಮರಾಠಿ, ಮತ್ತು ದ್ರಾವಿಡ ಭಾಷೆಗಳಾದ ತೆಲುಗು, ತಮಿಳು, ಮಲೆಯಾಳಂಗಳಿಂದಲೂ ಪದಗಳನ್ನು ಸ್ವೀಕರಿಸಿಕೊಂಡಿದೆ. ಈ ಪ್ರಕ್ರಿಯೆ ಏಕಪಕ್ಷೀಯವಾಗಿಯೂ ಮತ್ತು ಪರಸ್ಪರ ವಿನಿಮಯವೂ ಆಗಿದೆ.

ಕನ್ನಡದಲ್ಲಿ ಕನ್ನಡದ ಪದಗಳು ಮತ್ತು ಸ್ವೀಕರಣ ಪದಗಳು ಎಂದು ಎರಡೂ ಪ್ರತ್ಯೇಕ ಭಾಗ ಗಳಾಗಿ ವಿಭಾಗಿಸಿ ವಿವರಿಸುವದು ಕಷ್ಟವೇ, ಕನ್ನಡದಲ್ಲಿ ಹಿಂದಿನಿಂದಲು ಭಾಷಾ ಸ್ವೀಕರಣಗಳು ನಡೆದಿವೆ. ಹೀಗಾಗಿ ಈಗ ಸ್ವೀಕರಣ ಪದಗಳು ಕನ್ನಡದ ಪದಗಳ ರಚನೆಯಂತೆಯೆ ಪರಿವರ್ತನೆ ಗೊಂಡಿವೆ. ಹೀಗಾಗಿ ಅವುಗಳನ್ನು ಗುರುತಿಸುವುದು ಕಷ್ಟ. ಮೂಲ ದ್ರಾವಿಡದಿಂದ ಸ್ವತಂತ್ರವಾದಾಗ ಕನ್ನಡವು ಹೋಸ ಪದಗಳನ್ನು ರೂಪಿಸಿಕೊಳ್ಳುವಾಗ ಮಾಡಿಕೊಂಡಿರುವ ಬಗೆಗಳನ್ನ ಹೀಗೆ ಗುರುತಿಸಬಹುದು. ಅನ್ಯ ಭಾಷೆಯ ಮೂಲ ಪದಗಳನ್ನ ಯಥಾವತ್ತಾಗಿ ಅಥವಾ ಕೇಲವು ವ್ಯತ್ಯಾಸಗಳೊಂದಿಗೆ ಕನ್ನಡದಲ್ಲಿ ಬಳಸುವುದು. ಅನ್ಯ ಭಾಷೆಯ ಮೂಲ ಪದಕ್ಕೆ ಪರ್ಯಾಯವಾಗಿ ಹೊಸ ಪದವೊಂದನ್ನು ಕನ್ನಡದಲ್ಲಿ ಸೃಷ್ಠಿಸುವದು. ಕನ್ನಡದಲ್ಲಿ ಇಗಾಗಲೇ ಇರುವ ಪದರಚನೆ ಯೊಂದನ್ನು ಇರುವ ಅರ್ಥದಲ್ಲಿ ಅಥವಾ ಹೋಸ ಅರ್ಥದಲ್ಲಿ ಬಳಸುವದು (ನಾರಾಯಣ ಕೆ.ವಿ.೨೦೧೦). ಕನ್ನಡವು ಶಬ್ದಕೋಶ ಬೆಳವಣಿಗೆಗೆ ಹೊಸ ಶಬ್ದಗಳ ಸೃಷ್ಟಿಕ್ರಿಯೆಗಿಂತ ತಾನು ಸಂಪರ್ಕದಲ್ಲಿರುವ ಅನ್ಯ ಭಾಷೆಯಿಂದ ಸ್ವೀಕರಿಸಿದ್ದೆ ಹೆಚ್ಚು ಎನ್ನಬಹುದು. ಇದಕ್ಕೆ ಕುರುಹುಗಳಾಗಿ ಇಂದು ಕನ್ನಡದಲ್ಲಿ ಅನ್ಯ ಭಾಷೆಯ ಪದಗಳೇ ತುಂಬಿಕೊಂಡಿವೆ. ಆರಂಭದಲ್ಲಿ ಸಂಸ್ಕೃತದ ಪ್ರಭಾವಕ್ಕೊಳಗಾಗಿ ಕನ್ನಡವು ಕ್ರಮೇಣ ಇತರ ಭಾಷೆಗಳೆಡೆಗೆ ಹೊರಳಿ ಇಂದು ಎಲ್ಲಾ ಭಾರತೀಯ ಭಾಷೆಗಳಂತೆ ಇಂಗ್ಲೀಷ್ ಭಾಷೆಯಿಂದ ಸ್ವೀಕರಿಸಿದ ಪದಗಳೇ ಸಿಗುತ್ತವೆ.

ಕನ್ನಡವು ಸಂಸ್ಕೃತದಿಂದ ಪದಗಳನ್ನು ಸ್ವೀಕರಿಸುವಾಗ ಒಂದು ತತ್ಸಮವಾಗಿ ಇನ್ನೊಂದು ತದ್ಭವವಾಗಿ ಸ್ವೀಕರಿಸಿದೆ(ಈ ತತ್ಸಮ–ತತ್ಭವವೆಂದು ವಿಭಾಗಿಸಿರುವದು ರಚನೆಯಲ್ಲಾದ ಬದಲಾವಣೆ ಯನ್ನು ಗಮನದಲ್ಲಿಟ್ಟುಕೊಂಡು, ಅರ್ಥದ ಆಧಾರದ ಮೆಲಲ್ಲ). ಆದರೆ ಇದೇ ಕ್ರಮದಲ್ಲಿ ಇತರೆ ಭಾಷೆಗಳಿಂದ ಸ್ವೀಕರಿಸಿದರೂ ಅದನ್ನು ಕನ್ನಡ ಪರಿಸರ ತತ್ಸಮ–ತತ್ಭವ ಎನ್ನದೆ ಅಪಭ್ರಂಶ ಎಂದು ವಿವರಿಸಿಕೊಂಡಿದೆ. ಈ ಸ್ವೀಕೃತ ಪದಗಳು ಕನ್ನಡ ಶಬ್ದ ರಚನೆಯಲ್ಲಾದ ಎಲ್ಲಾ ಪಲ್ಲಟಗಳನ್ನು ತನ್ನಲ್ಲಿ ಮಾಡಿಕೊಂಡು ಬೆಳೆದಿವೆ(ಪ > ಹ, ತಾಲವೀಕರಣ... ಇತ್ಯಾದಿ). ಕೆಲವೊಮ್ಮೆ ಒಂದು ರಾಚನಿಕ ಪಲ್ಲಟವಾದ ನಂತರವೂ ಹಳೆಯ ರಚನೆಯಂತ ಪದಗಳನ್ನು ಸ್ವೀಕರಿಸಿದೆ ಆದ್ದರಿಂದಲೇ ಕನ್ನಡದಲ್ಲಿ ಪ>ಹ ವಾಗಿ ಪರಿವರ್ತನೆ ಆದರೂ ಕೆಲವು ಪದಗಳಲ್ಲಿ ಇನ್ನೂ "ಪ"ವಾಗಿಯೇ

ಉಳಿದಿವೆ. ಕನ್ನಡವು ಹಲವು ಭಾಷೆಗಳ ಶಬ್ದ ಸ್ವೀಕರಿಸಿದೆ ಎನ್ನುವುದರ ಅರ್ಥ ಅದು ಬರಿ ಆಕೃತಿಮಾಗಳನ್ನಷ್ಟೇ ಅಲ್ಲ ಅವುಗಳೊಂದಿಗೆ ಕೆಲವು ಧ್ವನಿಮಾಗಳನ್ನು ಸ್ವೀಕರಿಸಿದೆ. (ಫ಼, ಜ಼, ಮಹಾಪ್ರಾಣಗಳು..... ಇತ್ಯಾದಿ). ಒಂದು ಭಾಷೆಗೆ ಸ್ವೀಕರಣವಾಗಿ ಬಂದ ಪದಗಳು ಹಲವು ಕಾರಣಕ್ಕಾಗಿ ಬದಲಾಗುತ್ತವೆ. ಅವುಗಳಲ್ಲಿ ಕನ್ನಡದ ಇಂಡೋ–ಆರ್ಯನ್ ಭಾಷೆಯಿಂದ ಸ್ವೀಕರಿಸಿದ ಪದಗಳು ರಾಚನಿಕವಾಗಿ ಬದಲಾಗಿದ್ದು ಈ ಎರಡೂ ಭಾಷಿಕ ಪರಿವಾರದಲ್ಲಿರುವ ವ್ಯಾಕರಣಾತ್ಮಕ ವ್ಯತ್ಯಾಸ ಮತ್ತು ವರ್ಣಗಳ ಸಂಖ್ಯೆಯಲ್ಲಿರುವ ವ್ಯತ್ಯಾಸದಿಂದಲೇ ಎನ್ನಬಹುದು.

**ಗುಲಬರ್ಗಾ ಕನ್ನಡದಲ್ಲಿ ಸ್ವೀಕರಣ ಪದಗಳು**

ಗುಲಬರ್ಗಾವು ಬಹು ಭಾಷಿಕ ಪರಿಸರವುಳ್ಳ ಪ್ರದೇಶ ಇಲ್ಲಿ ಮರಾಠಿ, ಉರ್ದು, ಹಿಂದಿ ಭಾಷೆಗಳ ಪ್ರಭಾವ ಹೆಚ್ಚಾಗಿ ಕಂಡುಬರುತ್ತವೆ. ಭೌಗೋಳಿಕವಾಗಿ ಇದು ಮಹಾರಾಷ್ಟ್ರ ಗಡಿಗೆ ಹತ್ತಿಕೊಂಡಿದ್ದು, ಆಡಳಿತಾತ್ಮಕವಾಗಿ ನಜಾಮರ ಆಳ್ವಿಕೆಗೆ ಒಳಪಟ್ಟಿತ್ತು. ಹೀಗಾಗಿ ಇಲ್ಲಿನ ಕನ್ನಡ ನುಡಿಯಲ್ಲಿ ಉರ್ದು ಮತ್ತು ಮರಾಠಿ ಪದಗಳ ಬಳಕೆ ಹೆಚ್ಚಾಗಿ ಕಂಡುಬರುತ್ತವೆ.

ಗುಲಬರ್ಗಾ ಕನ್ನಡ ನುಡಿಯು ಮರಾಠಿ ಮತ್ತು ಉರ್ದುವಿನಿಂದ ಅನೇಕ ಪದಗಳನ್ನು ಸ್ವೀಕರಿಸಿದ್ದು ಆ ಪದಗಳಿಗೆ ಪರ್ಶೊ–ಅರೇಬಿಕ್ ಭಾಷೆಯು ಮೂಲವಾಗಿದ್ದು, ಮರಾಠಿ ಉರ್ದುವಿನೊಂದಿಗೆ ಅರಾಬಿಕ್ ಪಾರಸೀ ಪದಗಳೂ ಕೂಡ ಬಳಕೆಯಲ್ಲಿವೆ. ಉಳಿದ ಕನ್ನಡ ಒಳ ನುಡಿಗಳಂತೆ ಇಲ್ಲಿಯೂ ಕೂಡ ಸಂಸ್ಕೃತ, ಇಂಗ್ಲೀಷ್ ಪದಗಳು ಸಾಮಾನ್ಯವಾಗಿವೆ. ಇದೊಂದು ಅಧ್ಯಯನದ ಕ್ಷೇತ್ರವಾಗಿದೆ.

**ಅಧ್ಯಾಯ: ಒಂದು**

**ಅಧ್ಯಯನ ಉದ್ದೇಶ, ಸ್ವರೂಪ, ವ್ಯಾಪ್ತಿ, ಮಹತ್ವ ಮತ್ತು ವೈಧಾನಿಕತೆ.**

ಗುಲಬರ್ಗಾ ಕನ್ನಡ ಒಳನುಡಿಯ ಬಗ್ಗೆ ಮಾತನಾಡುವಾಗ ಮೊದಲಿಗೆ ಹೊಳೆಯುವ ಸಂಗತಿಯೆಂದರೆ ಆ ನುಡಿಯಲ್ಲಿರುವ ಉರ್ದು ಮತ್ತು ಮರಾಠಿ ಪದಗಳ ಬಳಕೆ. ಇದು ಸತ್ಯ ಕೂಡ. ಬಡಗ ಕನ್ನಡ ನುಡಿಯು ಉಳಿದ ಕನ್ನಡ ನುಡಿಗಳಿಗಿಂತ ಹೆಚ್ಚು ಅನ್ಯ ಭಾಷೆಯ ಪ್ರಭಾವಕ್ಕೊಳಗಾಗಿರುವುದು ಕಂಡುಬರುತ್ತದೆ ಎನ್ನುವುದು ನನ್ನ ಅಭಿಪ್ರಾಯ ಹೀಗೆನಿಸಲು ಉಳಿದ ಕನ್ನಡ ಒಳನುಡಿಗಳು ಇಂದು ಶಿಷ್ಟ ಕನ್ನಡಕ್ಕೆ ಹೆಚ್ಚು ಹತ್ತಿರವಿರುವುದು ಕಾರಣವಿರಬಹುದು.

ಕನ್ನಡಕ್ಕೆ ಸ್ವೀಕರಣಗೊಂಡಿರುವ ಪದಗಳನ್ನಿಟ್ಟುಕೊಂಡು ಅಧ್ಯಯನ ಮಾಡಿದಾಗ ಕನ್ನಡದ ಇತಿಹಾಸ ಗುರುತಿಸುವಾಗ ಮತ್ತು ಕನ್ನಡದ ಸ್ವರೂಪ ಇನ್ನಷ್ಟು ಗಟ್ಟಿಯಾಗಿ ಅರಿತುಕೊಳ್ಳಲು ಸಹಾಯಕವಾಗುತ್ತದೆ. ಕನ್ನಡ ಭಾಷಾವಿಜ್ಞಾನದ ಅಧ್ಯಯನವು ಇಂದು ಒಳನುಡಿಗಳ ಅಧ್ಯಯನಕ್ಕೆ ಒತ್ತು ಕೊಡುತ್ತಿದ್ದುದು ಮಹತ್ವದ ನಡೆ. ಈ ನಿಟ್ಟಿನಲ್ಲಿ ಗುಲಬರ್ಗಾ ಕನ್ನಡದಲ್ಲಿ ಬಳಕೆಗೊಳ್ಳುತ್ತಿರುವ ಭಾಷೆಯ ಸೊಗಡೆ ಆಕರ್ಷಕವಾಗಿದೆ. ಕನ್ನಡದ ಉಳಿದ ಒಳನುಡಿಗಳು ಇಂಗ್ಲೀಷ್‌ನ ದಟ್ಟ

ಪ್ರಭಾವಕ್ಕೊಳಗಾಗುತ್ತಿರುವಾಗ ಗುಲಬರ್ಗಾ ಕನ್ನಡವು ಇಂಗ್ಲೀಷ್‌ಗಿಂತ ಉರ್ದು ಮರಾಠಿ ಭಾಷೆಗಳ ದಟ್ಟ ಪ್ರಭಾವದಲ್ಲಿದೆ. ಇದು ಗುಲಬರ್ಗಾ ಕನ್ನಡ ನುಡಿಯನ್ನು ಇತರ ಒಳನುಡಿಗಳಿಂದ ಪ್ರತೇಕಿಸುತ್ತಿದೆ ಎನ್ನಬಹುದು. ಆದ್ದರಿಂದ ಈ ಪ್ರಕ್ರಿಯೆಯ ಬಗ್ಗೆ ಅಧ್ಯಯನದ ಅಗತ್ಯತೆ ಇದೆ. ಗುಲಬರ್ಗಾ ಕನ್ನಡದ ಬಗೆಗೆ ನಡೆದಿರುವ ಅಧ್ಯಯನಗಳು ಸ್ವಲ್ಪ ಕಡಿಮೆಯೆ. ಹೀಗಾಗಿ ಇಂತಹ ಭಾಷಿಕ ಪರಿಸರದಿಂದ ಬಂದ ನನ್ನಂಥವರಿಗೆ ಇನ್ನೊಂದು ಅನ್ಯ ಒಳನುಡಿ ಪರಿಸರದಲ್ಲಿದ್ದಾಗ ಗುಲಬರ್ಗಾ ಕನ್ನಡದ ಸ್ವರೂಪ ಕುತೂಹಲ ಸಂಗತಿಯೇ ಸರಿ. ಈ ನಿಟ್ಟಿನಾಗ ಗುಲಬರ್ಗಾ ಕನ್ನಡ ನುಡಿಯ ಸ್ವರೂಪವನ್ನು ಸ್ವೀಕರಣ ಪದಗಳ ಮೂಲಕ ತಿಳಿದುಕೊಳ್ಳುವ ಪ್ರಯತ್ನವೇ ಈ ಅಧ್ಯಯನದ ಉದ್ದೇಶವಾಗಿದೆ.

**ಅಧ್ಯಯನದ ಸ್ವರೂಪ**

ಕನ್ನಡಕ್ಕೆ ಸ್ವೀಕರಣವಾದ ಪದಗಳ ಕುರಿತು ಅಧ್ಯಯನ ಮಾಡುವಾಗ ಮುಖ್ಯವಾಗಿ ಗಮನಿಸ ಬೇಕಾದ ಅಂಶಗಳೆಂದರೆ, ಆ ಪದಗಳು ಸ್ವೀಕೃತವಾದ ವಲಯಗಳಾವವು? ಅವುಗಳು ಸ್ವೀಕರಣವಾಗಲು ಇರುವ ಕಾರಣಗಳಾವವು? ಎಂತಹ ಪದಗಳು ಸ್ವೀಕರಣವಾಗಿವೆ? ಅವುಗಳ ರಚನೆ ಏನು? ಅವು ಮೂಲ ರಚನೆಯೇ ಉಳಿಸಿಕೊಂದಿವಿಯೆ? ಉಳಿಸಿಕೊಂಡಿದರೆ ಯಾವ ವಲಯದಲ್ಲಿ ಉಳಸಿ ಕೊಂಡಿವೆ? ಯಾವ ವಲಯದಲ್ಲಿ ಬದಲಾಗಿವೆ? ಇದನ್ನು ಅಧ್ಯಯನ ಮಾಡುವದರೊಂದಿಗೆ ರಚನೆಗೆ ಸಂಬಂಧಿಸಿದಂತೆ ಕನ್ನಡವು ಕಾಲ ಕಾಲಕ್ಕೆ ಮಾಡಿಕೊಂಡಿರುವ ರಾಚನಿಕ ಬದಲಾವಣೆಗಳು ಸ್ವೀಕರಣ ಪದಗಳಲ್ಲಿ ನಡೆದಿದೆಯೆ? ಇಂತಹ ರಚನೆಗೆ ಸಂಬಂದಿಸಿದ ಸಂಗತಿಗಳನ್ನು ಅಧ್ಯಯನಕ್ಕೆ ಒಳಗುಮಾಡುವುದು ಈ ಅಧ್ಯನದ ಸರೂಪವಾಗಿದೆ.

**ಅಧ್ಯಯನದ ವ್ಯಾಪ್ತಿ**

ಈವರೆಗಿನ ಅನ್ಯಭಾಷೆಯಿಂದ ಸ್ವೀಕರಣವಾದ ಪದಗಳ ಮೇಲಿನ ಅಧ್ಯಯನಗಳು ಒಂದು ವಿಶಾಲ ಕ್ಷೇತ್ರವನಿಟ್ಟುಕೊಂಡು ನಡೆದಿವೆ. ಹಾಗಾಗಿ ಒಂದು ಸೀಮಿತ ಪ್ರದೇಶಕ್ಕೆ ಅಷ್ಟೊಂದು ಗಮನಕೊಡುವ ಸಧ್ಯತೆ ಕಡಿಮೆ ಇರುತ್ತದೆ. ಒಂದು ಸಿಮಿತ ಪ್ರದೇಶ. ಒಂದು ಅಥವಾ ಎರಡು ಭಾಷೆಗಳಿಂದ ಬಂದ ಸ್ವೀಕೃತ ಪದಗಳನ್ನಿಟ್ಟುಕೊಂಡು ಮಾಡುವ ಅಧ್ಯಯನವು ಒಂದಷ್ಟು ಗಟ್ಟಿ ಫಲಿತಾಂಶ ಕೊಡಬಲ್ಲದೆಂದು ಈ ಅಧ್ಯಾಯನದ ನಂಬಿಕೆಯಾಗಿದೆ. ಮತ್ತು ಇವರೆಗಿನ ಅಧ್ಯಯನಗಳೆಲ್ಲ ಬರಹದ ನೇಲೆಯಲ್ಲಿ ಆದವುಗಳು. ಸಸ್ಸುರ ಹೇಳುವಂತೆ "language has an oral tradition that is independence that makes a pure science of speech possible" – ಹೀಗೆ ಮುಂದುವರೆದು ಮಾತು ನಿಜವಾದ ಭಾಷೆ ಬರಹ ಅದರ ಪ್ರತಿನಿಧಿ ಎನ್ನುತ್ತಾನೆ. ಇಂದು ಮಾತಿಗೂ ಮನ್ನಣೆ ಸಿಗುತ್ತಿರುವಾಗ ಈ ಅಧ್ಯಯನವು ಮುಖ್ಯವಾಗಿ ಆಡುಮಾತಿನ ನೆಲೆಗೆ ಹೆಚ್ಚು ಒತ್ತು ಕೊಡುವ ನಿಟ್ಟಿನಲ್ಲಿ ಈ ಅಧ್ಯಾಯನದ ವ್ಯಾಪ್ತಿಯಾಗಿ ಗುಲಬರ್ಗಾ ಕನ್ನಡದ ಪ್ರದೇಶ ಮಾತ್ರ ಇಟ್ಟುಕೊಂಡು.

ಗುಲಬರ್ಗಾ ಪರಿಸರದಲ್ಲಿ ಕಂಡುಬರುವ ಅಥವಾ ಮಾತಿನ ನೆಲೆಯಲ್ಲಿ ಮಾತ್ರ ಕಂಡು ಬರುವ ಉರ್ದು ಮತ್ತು ಮರಾಠಿ ಭಾಷೆಯಿಂದ ಸ್ವೀಕರಣವಾಗಿ ಬಂದ ಪದಗಳನ್ನಷ್ಟೆ ಅಧ್ಯಯನದ ವ್ಯಾಪ್ತಿಗೆ ಒಳಗು ಮಾಡಿಕೊಳ್ಳುವ ಗುರಿಯನ್ನು ಹೊಂದಿದೆ.

**ಅಧ್ಯಯನದ ಮಹತ್ವ**

ಈ ಅಧ್ಯಯನವು ಗುಲಬರ್ಗಾ ಕನ್ನಡ ಸ್ವೀಕರಣವಾಗಿ ಬಂದ ಪದಗಳ ಕುರಿತು ಆಗಿರುವದರಿಂದ ಈ ಪದಗಳ ಮುಲಕ ಗುಲಬರ್ಗಾ ಕನ್ನಡದ ರಚನೆಯನ್ನು ಅರಿಯಬಹುದು. ರಚನೆಯ ಕುರಿತ ಅಧ್ಯಯನಗಳು ಆ ಭಾಷೆಯ ಚಾರಿತ್ರಿಕ ನೆಲೆಗಟ್ಟನ್ನ ಅರಿಯಲು ತುಂಬಾ ಸಹಾಯಕವಾಗಿ ನಿಲ್ಲಬಲ್ಲವುಗಳಾಗಿರುತ್ತವೆ. ಹೀಗಾಗಿ ಈ ಅಧ್ಯಯನವು ಕನ್ನಡದ ರಚನೆಯನ್ನ ತಿಳಿಯುವದರೊಂದಿಗೆ ಅದರ ಚಾರಿತ್ರಿಕತೆಯನ್ನ ತಿಳಿಸುವಲ್ಲಿ ಮಹತ್ವದ ಪಾತ್ರವಹಿಸುತ್ತದೆ. ಕನ್ನಡ ರಚನೆ ಕುರಿತ ಅಧ್ಯಯನಗಳು ಕಡಿಮೆಯಾಗುತಿರುವ ಈ ದಿನಗಳಲ್ಲಿ ಸ್ವೀಕರಣ ಪದಗಳ ಮುಲಕ ಗುಲಬರ್ಗಾ ಕನ್ನಡದ ರಚನೆ ವಿವರಿಸುತಿರುವ ಈ ಅಧ್ಯಯನ ಕನ್ನಡದಲ್ಲಿ ನಡೆದ ಶ್ರೇಷ್ಠ ಅಧ್ಯಯನಗಳ ಸಾಲಿನಲ್ಲಿ ನಿಲ್ಲಬಲ್ಲದಾಗಿರುತ್ತದೆ. ಕನ್ನಡವು ಕಟ್ಟಿಕೊಳ್ಳುತಿರುವ ಹೊಸ ರಚನೆಗಳನ್ನು ವಿವರಿಸುವಲ್ಲಿ ಶಕ್ತಿಯುತ ಕುರುಹು ನಡಬಲ್ಲದೆಂದು ನಂಬಿಕೆ ಇದೆ. ಒಟ್ಟಿನಲ್ಲಿ ಈ ಅಧ್ಯಯನ ಗುಲಬರ್ಗಾ ಜನರ ಧ್ವನಿಯಾಗಿ ನಿಂತು ಮುಂದಿನ ಅಧ್ಯಯನಗಳಿಗೆ ಅಕರವಾಗುವ ಕಸುವು ಹೊಂದಿದೆ.

**ಅಧ್ಯಯನದ ವೈಧಾನಿಕತೆ**

ಗುಲಬರ್ಗಾ ಕನ್ನಡದಲ್ಲಿ ಸ್ವೀಕರಣ ಪದಗಳು ಎಂಬ ಈ ಅಧ್ಯಯನವು ಗುಲಬರ್ಗಾ ಕನ್ನಡ ನುಡಿ ಆಡುವ ಜನರ ನೇರ ಅಭಿವ್ಯಕ್ತಿಯ ಅಧ್ಯಯನವಾಗಿರುವುದರಿಂದ ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿ ವಿವರಣಾತ್ಮಕ ನೆಲೆಯಲ್ಲಿ ಅಧ್ಯಯನ ಮಾಡಲಾಗುವುದು. ಇದು ಪದಗಳ ಮೇಲಿನ ಅಧ್ಯಯನವಾಗಿರೊದರಿಂದ ಅವಶ್ಯಕತೆಗನುಗುಣವಾಗಿ ಚಾರಿತ್ರಿಕ ಹಿನ್ನೆಲೆ ವಿಶ್ಲೇಷಣೆ ಮಾಡಲಾಗುವುದು.

**ಅಧ್ಯಾಯ: ಎರಡು**

**ಗುಲಬರ್ಗಾ ಕನ್ನಡ ನುಡಿ : ಚಾರಿತ್ರಿಕ ನೆಲೆ**

ಈ ಅಧ್ಯಾಯದಲ್ಲಿ ಅಧ್ಯಯನಕ್ಕೆ ಪೂರಕವಾಗಿ ಗುಲಬರ್ಗಾ ಕನ್ನಡ ನುಡಿಯ ಚಾರಿತ್ರಿಕ ವಿವರಗಳನ್ನು ದಾಖಲಿಸಲಾಗುವುದು. ಮೂಲ ದ್ರಾವಿಡದಿಂದ ಕನ್ನಡವು ಆಧುನಿಕ ಪ್ರಭೇದಗಳಾಗಿ ಬೆಳೆದಿರುವ ನೆಲೆಗಳನ್ನು ವಿವರಿಸುವ ಪ್ರಯತ್ನ ಮಾಡಲಾಗುವದು.

**ಅಧ್ಯಾಯ: ಮೂರು**

**ಗುಲಬರ್ಗಾ ಕನ್ನಡ ನುಡಿ : ಸ್ವೀಕೃತ ನಾಮಪದಗಳ ರಚನೆ**

ಈ ಅಧ್ಯಾಯದಲ್ಲಿ ಕ್ಷೇತ್ರಕಾರ್ಯದಲ್ಲಿ ಸಿಕ್ಕ ಸ್ವೀಕೃತ ನಾಮಪದಗಳನ್ನು ಅವುಗಳ ರಚನೆಗೆ ಅನುಗುಣವಾಗಿ ವಿಂಗಡಿಸಿ, ಅವುಗಳ ಮೂಲ ರಾಚನಿಕ ಅಂಶ ಮತ್ತು ಕನ್ನಡಕ್ಕೆ ಬಂದ ಮೇಲೆ ಆದ ರಾಚನಿಕ ಪರಿವರ್ತನೆಗಳ ಬಗ್ಗೆ ವಿಶ್ಲೇಷಿಸಲಾಗುವದು.

**ಅಧ್ಯಾಯ: ನಾಲ್ಕು**

**ಗುಲಬರ್ಗಾ ಕನ್ನಡ ನುಡಿ : ಸ್ವೀಕೃತ ಕ್ರಿಯಾಪದಗಳ ರಚನೆ**

ಈ ಅಧ್ಯಾಯದಲ್ಲಿ ಸ್ವೀಕೃತ ಕ್ರಿಯಾಪದಗಳ ಕುರಿತು ವಿಶ್ಲೇಷಿಸಲಾಗುವುದು. ಇಲ್ಲಿ ಮೂಲ ಕ್ರಿಯಾಪದಗಳು ಕನ್ನಡದಲ್ಲಿ ಹೀಗೆ ಬಳಕೆಗೊಂಡಿವೆ, ಮೂಲದಲ್ಲಿಯ ಕ್ರಿಯಾಪದಗಳು ಕನ್ನಡ ಸಂದರ್ಭದಲ್ಲಿ ಕ್ರಿಯಾ ಪದಗಳಾಗಿ ಪರಿವರ್ತಿಸುವಾಗ ಯಾವ ನಿಯಮಗಳನ್ನು ಕಟ್ಟುಕೊಂಡಿವೆ, ಅವುಗಳ ಸ್ವರೂಪ ಎಂಥದ್ದು ವಿವರಿಸಲಾಗುವುದು.

**ಅಧ್ಯಾಯ: ಐದು**

**ಗುಲಬರ್ಗಾ ಕನ್ನಡ ನುಡಿ : ಸ್ವೀಕೃತ ಗುಣವಾಚಕಗಳ ರಚನೆ**

ಈ ಅಧ್ಯಾಯದಲ್ಲಿ ನಾಮಪದ, ಕ್ರಿಯಾಪದಗಳಂತೆ ಸ್ವೀಕೃತ ಗುಣವಾಚಕಗಳು ಕನ್ನಡಕ್ಕೆ ಬಂದ ಮೇಲೆ ಪಡೆದುಕೊಂಡ ಸ್ವರೂಪ ಎಂಥದ್ದು, ಮೂಲ ಸ್ವರೂಪ ಎಂಥದ್ದು ರಾಚನಿಕವಾಗಿ ಆದ ಮಾರ್ಪಾಟುಗಳೇನು. ವಿವರಿಸಲಾಗುವುದು.

**ಅಧ್ಯಾಯ: ಆರು**

**ಗುಲಬರ್ಗಾ ಕನ್ನಡ ನುಡಿ : ಸ್ವೀಕೃತ ಸಂಖ್ಯಾವಾಚಕಗಳ ರಚನೆ**

ಒಂದು ಭಾಷೆಯು ನಾಮಪದ, ಕ್ರಿಯಾಪದ ಮತ್ತು ಗುಣಪದಗಳನ್ನು ಸರಾಗವಾಗಿ ಇನ್ನೊಂದು ಭಾಷೆಯಿಂದ ಎರವಲಾಗಿ ಪಡೆಯಬಹುದು. ವಿಶೇಷಣ ಮತ್ತು ಸಂಖ್ಯಾವಾಚಕಗಳು ಎರವಲಾಗಿ ಬರುವುದು ಕಷ್ಟ ಸಾಧ್ಯ. ಆದರೆ ಗುಲಬರ್ಗಾ ಕನ್ನಡವು ಸಂಖ್ಯಾವಾಚಕಗಳನ್ನು ಕನ್ನಡ ನುಡಿಯ ಸಂಖ್ಯಾವಾಚಕಗಳಿಗಿಂತ ವ್ಯಾಪಕವಾಗಿ ಬಳಸಿಕೊಳ್ಳುತ್ತಿದೆ. ಮತ್ತು ಉಳಿದ ಭಾಷಿಕ ಘಟಕಗಳಲ್ಲಾದಷ್ಟು ರಾಚನಿಕ ಪಲ್ಲಟವು ಸಂಖ್ಯಾವಾಚಕಗಳಲ್ಲಿ ಕಾಣುತ್ತಿಲ್ಲ. ಈ ಸಂಗತಿಯನ್ನು ಈ ಅಧ್ಯಾಯದಲ್ಲಿ ವಿವರಿಸಲಾಗುವುದು.

**ಅಧ್ಯಾಯ: ಏಳು**

**ಸಮಾರೋಪ**

ಈ ಅಧ್ಯಾಯದಲ್ಲಿ ಅಧ್ಯಯನಕ್ಕೆ ಹಾಕಿಕೊಂಡ ಯೋಜನೆ ಮತ್ತು ಗುರುತಿಸಿಕೊಂಡ ಸಮಸ್ಯೆಗಳಿಗೆ ಅಧ್ಯಯನದ ಕೊನೆಯಲ್ಲಿ ಸಾಧಿಸಿದ ಪ್ರಗತಿಯ ಬಗ್ಗೆ ವಿವರಿಸಲಾಗುವುದು. ಇದು ಇಡಿ ಅಧ್ಯಯನದ ತಿರುಳು ಒಳಗೊಂಡ ಅಧ್ಯಾಯವಾ ಗಿರುವದರಿಂದ ಅಧ್ಯಯನದ ಕಾಲಕ್ಕೆ ಕಂಡ ಫಲಿತಗಳನ್ನು ವಿವರಿಸಲಾಗುವದು.

ಅಧ್ಯಾಯ ಎರಡು

## ಗುಲಬರ್ಗಾ ಕನ್ನಡ ನುಡಿ: ಚಾರಿತ್ರಿಕ ನೆಲೆ

ಗುಲಬರ್ಗಾ ಜಿಲ್ಲೆಗೆ ಪ್ರಾಚೀನ ಕಾಲದಿಂದಲೂ ಉಜ್ವಲವಾದ ಇತಿಹಾಸವಿದೆ. ರಾಷ್ಟ್ರಕೂಟ ನೃಪತುಂಗನ ಕಾಲದಿಂದಲೂ ಇದಕ್ಕೆ ಮಹತ್ವದ ಸ್ಥಾನವಿದೆ. ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನ ನಾಗಾವಿ ಒಂದು ಪ್ರಸಿದ್ಧ ವಿದ್ಯಾಕೇಂದ್ರವಾಗಿದ್ದು, ಕನ್ನಡದ ಮೊದಲ ಉಪಲಬ್ದ ಗ್ರಂಥವಾದ ಕವಿರಾಜಮಾರ್ಗವು ಈ ನೆಲದಲ್ಲಿಯೇ ಸಿಕ್ಕಿದೆ. ಆ ಕಾಲಕ್ಕೆನೆ ಕನ್ನಡವನ್ನು ದಿನನಿತ್ಯದ ಧ್ವನಿಯಾಗಿಸಿಕೊಂಡು ಬರಹಕ್ಕಿಳಿಸಿದ ಕೀರ್ತಿ ಈ ನೆಲಕ್ಕಿದೆ. ಮುಂದೆ ೧೨ನೇ ಶತಮಾನದ ಕಾಲಕ್ಕೆ ಬಸವಾದಿ ಶರಣರು ಇದರ ಕೀರ್ತಿಯನ್ನು ಇನ್ನಷ್ಟು ಮೇರು ಪರ್ವತಕ್ಕೇರಿಸಿದರು ಎನ್ನಬಹುದು. ಮುಂದೆ ೧೪ನೇ ಶತಮಾನದಲ್ಲಿ ಬಹುಮನಿ ಅರಸರು ಗುಲಬರ್ಗಾವನ್ನು ತಮ್ಮ ಅಡಳಿತ ಕೇಂದ್ರವನ್ನಾಗಿಸಿಕೊಂಡ ಮೇಲೆ ಕನ್ನಡಿಗರ ಬದುಕಿನ ದಿಕ್ಕು ಬದಲಾದಂತೆ ಕನ್ನಡ ಭಾಷೆಯ ಸ್ವರೂಪವೂ ಪರಭಾಷೆಗಳ ಹಿಡಿತಕ್ಕೆ ಸಿಕ್ಕಿ ಬದಲಾವಣೆಗೊಳ್ಳುತ್ತ ಬಂದಿತು. ಸುಮಾರು ಆರು ನೂರು ವರ್ಷಗಳ ಕಾಲ ಬಹಮನಿ ಅರಸರ ಆಳ್ವಿಕೆಗೊಳ್ಳಪಟ್ಟಿದ್ದ ಕನ್ನಡವು ಉರ್ದುವಿನ ದಟ್ಟ ಪ್ರಭಾವಕ್ಕೊಳಗಾಗಿದೆ. ಉರ್ದು ಪದಗಳು ಗುಲಬರ್ಗಾ ಜನರ ದಿನನಿತ್ಯದ ಮಾತಿನಲ್ಲಿ ಹಾಗೆಯೇ ಹಾಸುಹೊಕ್ಕಿವೆ. ಉರ್ದು ಪದಗಳು ಇಲ್ಲಿಯ ಪದಗಳೊಂದಿಗೆ ಕೂಡಿಕೊಂಡು ಇಲ್ಲಿಯ ಭಾಷೆಯೊಂದು ವಿಶೇಷ ರೂಪ ಪಡೆದುಕೊಂಡಿದೆ. ಇವನ್ನು ಮೊಗಲಾಯಿ ಕನ್ನಡವೆಂದು, ಅದನ್ನಾಡುವ ಜನರು ಮೊಗಲಾಯಿಗಳೆಂದು ಕರೆಯುತ್ತಿದ್ದರು. ಇವರು ಮಾತನಾಡುವುದು ಮೊಗಲಾಯಿ ಕನ್ನಡವಾದರೆ ಬರವಣಿಗೆಗೆ ಬಳಸುತ್ತಿದ್ದ ಲಿಪಿ ಮೋಡಿಲಿಪಿಯಾಗಿತ್ತು. ಮುಂದೆ ನಿಜಾಮರ ಆಳ್ವಿಕೆಯ ಕಾಲಕ್ಕೂ ಇದೆ ಸ್ಥಿತಿ ಮುಂದುವರೆದುಕೊಂಡು ಬಂದಿತು. ಮಹಾರಾಷ್ಟ್ರವು ತನ್ನ ಭೌಗೋಳಿಕ ಮೇರೆಗಳನ್ನು ಹೆಚ್ಚಿಸಿಕೊಳ್ಳುತ್ತ ಕನ್ನಡವನ್ನು ನೂರು ವರ್ಷಕ್ಕೆ ಒಂದು ನದಿಯಂತೆ

ನೂಕುತ್ತ ಗೋಡೆಯನ್ನು ದಾಟಿಬಂದಿದೆ (ಶಂಭಾ ೧೯೪೭) ಇಂದು ಗುಲಬರ್ಗಾ ಕನ್ನಡದ ಅರ್ಧ ಭಾಗವು ಮರಾಠಿಯ ದಟ್ಟ ಪ್ರಭಾವದಲ್ಲಿದೆ. ಇದೂ ಗುಲಬರ್ಗಾ ಕನ್ನಡ ಸ್ವರೂಪವನ್ನು ಇಬ್ಭಾಗವನ್ನಾಗಿಸುವ ಪ್ರಕ್ರಿಯೆಯಾಗಿದೆ. ಒಂದೆಡೆ ಮರಾಠಿ ಇನ್ನೊಂದೆಡೆ ತೆಲುಗು ಮದ್ಯ ಸುಮಾರು ಶೇ. ೩೫ರಷ್ಟು ಮುಸ್ಲಿಂರಿಂದ ಉರ್ದು. ಇಂತಹ ವಾತಾವರಣ ಗುಲಬರ್ಗಾ ಕನ್ನಡವನ್ನು ಸ್ವೀಕರಣ ಪ್ರಕ್ರಿಯೆಗೆ ಅನಿವಾರ್ಯತೆಯ ಸ್ಥಿತಿ ನಿರ್ಮಾಣ ಮಾಡುತ್ತಿವೆ.

**ಮೂಲ ದ್ರಾವಿಡದಿಂದ > ಮೂಲ ಕನ್ನಡಕ್ಕೆ**

ಭಾಷಾ ಪರಿವಾರದ ಕಲ್ಪನೆಯು ತುಂಬಾ ಇತ್ತೀಚಿನದು. ತೌಲನಿಕ ಭಾಷಾವಿಜ್ಞಾನವು ತನ್ನ ಅಧ್ಯಯನ ಪ್ರಾರಂಭಿಸುತ್ತಿದ್ದಂತೆಯೇ, ಅನೇಕ ಬುಡಕಟ್ಟು ಭಾಷೆಗಳನ್ನು ತೌಲನಿಕವಾಗಿ ನೋಡ ತೊಡಗಿತು. ಸಂಸ್ಕೃತವನ್ನು ಯುರೋಪಿನ ಭಾಷೆಗಳೊಂದಿಗೆ ಎದುರಿಗಿಟ್ಟು ನೋಡಿದಾಗ ಈ ಭಾಷಾ ಪರಿವಾರದ ಕಲ್ಪನೆ ಬೆಳೆದು ಭಾಷೆಗೆ ಪರಿವಾರ ಗುರುತಿಸಿ ಹೆಸರಿಡುವ ಪ್ರಕ್ರಿಯೆ ಕೂಡಿತೆಂದು ಹೇಳಬಹುದು.

ಮುಂದೆ ಕನ್ನಡ, ತಮಿಳು, ತೆಲುಗು, ಮಲೆಯಾಳಂ, ಗೊಂಡಿ ಭಾಷೆಗಳ ಅಧ್ಯಯನ ಮಾಡಿದ ಎಲ್ಲಿಸ್ ಮೊದಲಾದವರೆಲ್ಲ ಇವುಗಳಿಗೆಲ್ಲ ಒಂದೇ ಮನೆತನವಿರುವ ಕನಸ್ಸನ್ನು ಕಂಡರು. ಕನ್ನಡ, ತಮಿಳು, ತೆಲುಗು, ಮಲೆಯಾಳಂ, ಗೊಂಡಿ, ತುಳು ಮೊದಲಾದ ನುಡಿಗಳು ದ್ರಾವಿಡ ಎಂಬ ನುಡಿ ಕುಟುಂಬಕ್ಕೆ ಸೇರಿದವರೆಂದು ಕಾಲ್ಡವೆಲ್ ಹೆಸರಿಸಿದನು (Robert Caldwe "is usually credited for inventing the term Dravidian as a generlic name of the South Indian Family of Languages (ಕಮಿಲ್‌ಬಿಲ್, ೧೯೯೦ : xx). ದ್ರಾವಿಡ ಭಾಷಾ ಪರಿವಾರದಲ್ಲಿ ಇಪ್ಪತ್ತಾರಕ್ಕೂ ಹೆಚ್ಚು ನುಡಿಗಳಿವೆ. ಆ ನುಡಿಗಳ ಸ್ವರೂಪ, ಒಳ ಗುಂಪುಗಳ ಬಗೆಗಿನ ವಿಚಾರ ಇಲ್ಲಿ ಈ ಅಧ್ಯಯನಕ್ಕೆ ಭಾರವಾಗಬಲ್ಲವು.

ಮೂಲ ದ್ರಾವಿಡದ ಬಗ್ಗೆ ಅನೇಕ ಅಧ್ಯಯನಗಳು ಬಂದಿವೆ. ಅವು ಅದರ ನಿಷ್ಪತ್ತಿ, ಸ್ವರೂಪದ ಬಗ್ಗೆ ಒಂದಷ್ಟು ಹೆಚ್ಚಿನ ತಿಳುವಳಿಕೆಯೇ ನೀಡುವಂಥವುಗಳಾಗಿವೆ. ಆದರೆ ಮೂಲ ಕನ್ನಡದ ಬಗ್ಗೆ ಇರುವ ತಿಳುವಳಿಕೆ ಸಾಲದು. ಈ ನಿಟ್ಟಿನಲ್ಲಿ ಒಂದಷ್ಟು ಕೆಲಸಗಳು ನಡೆದಿವೆ. ಶಂಕರಬಟ್ಟ ಕನ್ನಡ ಭಾಷೆಯ ಕಲ್ಪಿತ ಚರಿತ್ರೆ (೧೯೯೮), ಕನ್ನಡ ನುಡಿ ನಡೆದುಬಂದ ದಾರಿ (೨೦೦೭), ಬಸವರಾಜ ಕೋಡಗುಂಟಿ ಕನ್ನಡ ವಿಭಕ್ತಿ ರೂಪಗಳ ಐತಿಹಾಸಿಕ ಬೆಳವಣಿಗೆ (೨೦೧೨). ಇವುಗಳ ಬಗ್ಗೆ ಇನ್ನು ಹೆಚ್ಚಿನ ಅಧ್ಯಯನಗಳ ಅವಶ್ಯಕತೆ ಇದೆ.

ಮೂಲ ದ್ರಾವಿಡದಿಂದ ಮೊದಲಿಗೆ ಉತ್ತರ ದ್ರಾವಿಡದ ಬ್ರಾಹು ಈ ಬೇರೆಯಾಗಿರಬೇಕೆಂದು ಈಗಿನ ಊಹೆ. ಇದಕ್ಕೆ ಎಂಡ್ರೊನೊವ್ ಅವರು (೧೯೭೦) - The Disintegretion of proto-

Dravidian beagn at the torn of the fourth Millennium B.C. with the separation of brahui ಎನ್ನುತ್ತಾರೆ. ಇದು ಮೇಲಿನ ತಿಳುವಳಿಕೆಯನ್ನು ಎತ್ತಿ ಹಿಡಿಯುವಂಥದ್ದಾಗಿದೆ. ಈ ಕಾಲಕ್ಕೆ ಉಳಿದ ಪ್ರದೇಶದ ದ್ರಾವಿಡ ಭಾಷೆಗಳಲ್ಲಿ ಒಳನುಡಿಗಳಿರುವ ಸಾಧ್ಯತೆಗಳಿವೆ. ಈ ಸಾಧ್ಯತೆಗೆಳೇ ಆ ನುಡಿಗಳಲ್ಲಿ ಬೆಳವಣಿಗೆ ಕಂಡು ಒಡೆದು ಮಧ್ಯ ದ್ರಾವಿಡ ಮತ್ತು ದಕ್ಷಿಣ ದ್ರಾವಿಡ ನುಡಿಯಾಗಿ ಒಡೆದುಕೊಂಡಿವೆ. ದಕ್ಷಿಣ ದ್ರಾವಿಡ ತನ್ನ ಆರಂಭಿಕ ಹಂತದಲ್ಲಿಯೆ ಮತ್ತೆ ಎರಡೂ ಹಂತವಾಗಿ ಒಡೆದುಕೊಂಡಿದೆ. ಮೊದಲನೆಯದ್ದು ಕನ್ನಡ, ತಮಿಳು, ಮಲೆಯಾಳ, ಕೊಡಗು, ತೊದ, ಕೋತ, ಇರುಳ ಮತ್ತು ಕುರುಂಬ ಈ ನುಡಿಗಳನ್ನು ದಕ್ಷಿಣ ದ್ರಾವಿಡ-೧ ಮತ್ತು ಮಧ್ಯ ದ್ರಾವಿಡದಲ್ಲಿ ಸೇರಿಸಿರುವ ತೆಲುಗು, ಗೊಂಡಿ, ಕೊಂಡ, ಕೂಂಯಿ, ಕುವಿ, ಪೆಗೊ ಮತ್ತು ಮುಂಡ ನುಡಿಗಳನ್ನು ದಕ್ಷಿಣ ದ್ರಾವಿಡ-೨ ಎಂಬುದಾಗಿ ಪರಿಗಣಿಸಬೇಕೆಂದು ಭ. ಕೃಷ್ಣಮೂರ್ತಿ (೨೦೦೩, ಉದ್ಧೃತ, ಬಟ್ಟ, ೨೦೦೭) ಅವರು ವಾದಿಸುತ್ತಾರೆ. ಈ ವಾದವನ್ನು ಶಂಕರಭಟ್‌ರು, ಕೋಡಗುಂಟಿಯವರು ಒಪ್ಪಿ ತಮ್ಮ ಬರವಣಿಗೆಯಲ್ಲಿ ಉಲ್ಲೇಖಿಸಿದ್ದಾರೆ.

ದಕ್ಷಿಣ ದ್ರಾವಿಡ ಭಾಷೆಗಳು ಮೂಲ ದ್ರಾವಿಡದಿಂದ ಬೇರೆಯಾಗುತ್ತಿದ್ದಂತೆ ಅದರೊಳಗಿನ ಒಳನುಡಿಗಳು ಇನ್ನಷ್ಟು ಬೆಳವಣಿಗೆ ಕಂಡುಕೊಂಡು ಸ್ವಂತಿಕೆಯನ್ನು ಬೆಳೆಸಿಕೊಂಡವು. ದಕ್ಷಿಣ ದ್ರಾವಿಡ-೨ರಲ್ಲಿ ತೆಲುಗು ನಂತರ ಗೊಂಡಿ ಬೇರಾದವು ಈ ವೇಳೆಗಾಗಲೇ ದ್ರಾವಿಡ-೧ರಲ್ಲಿ ತುಳು ಬೇರಾಗಿರಬೇಕು. ಅನಂತರ ತೋಡ ಮತ್ತು ಕೋತಗಳು ಕನ್ನಡ (The South Dravidian Language Porved very stable and disintegrated only at the beginning of A.D. When kannada Separeted form ation ಎಂಡ್ರೊನೊವ್; ೧೯೮೦; ೨೪) ದೊಂದಿಗೆ ಮಲೆಯಾಳಂ ಮತ್ತು ಇರುಳ ಇವುಗಳು ತಮಿಳುನೊಂದಿಗೆ ಎರಡು ಗುಂಪಾಗಿ ಸ್ವತಂತ್ರವಾಗಿರಬೇಕೆಂದು ಅಭಿಪ್ರಾಯ ಪಡುತ್ತಾರೆ. ಶಂಕರಬಟ್ಟರು (೨೦೦೭) ತುಳುವಿನೊಂದಿಗೆ ಕೊರಗ ನುಡಿ ಮೊದಲಿಗೆ ಸ್ವತಂತ್ರವಾಗಿದೆ ಎನ್ನುತ್ತಾರೆ. ಅನಂತರ ಕೋತ, ತೊದ ಆಮೇಲೆ ಕೊಡಗು,ಕುರುಂಬ ನುಡಿಗಳು ಸ್ವತಂತ್ರವಾಗಿ ಉಳಿದ ನುಡಿ ರೂಪಕ್ಕೆ ತಮಿಳು ಎಂದು ಹೆಸರು ಬಂದಿದ್ದು ಅದರಿಂದ ಇತ್ತೀಚಿನ ಇರುಳ, ಮಲೆಯಾಳಂ (Malayalm emerged form a Mediaeval tamil daialect in the 10th-13th centuries A.D. (ಎಂಡ್ರೊನೊವ್:೨೪) ಹುಟ್ಟಿಕೊಂಡಿವೆ ಎನ್ನುತ್ತಾರೆ.

ಕನ್ನಡದ ಧ್ವನಿಗಳು ಉಳಿದ ದಕ್ಷಿಣ ದ್ರಾವಿಡ ಭಾಷೆಗಳೊಂದಿಗೆ ಸಾಕಷ್ಟು ವ್ಯತ್ಯಾಸಗಳೊಂದಿಗೆ ಬೆಳೆದಿರುವುದನ್ನು ಕಾಣಬಹುದು. ಘೋಷ ಧ್ವನಿಗಳ ಬೆಳವಣಿಗೆ, ಅನುನಾಸಿಕಗಳಲ್ಲಿನ ಬೆಳವಣಿಗೆ, ಪದದ ಕೊನೆಯಲ್ಲಿ ಆದ ಬೆಳವಣಿಗೆಗಳು, ಜ್, ಟ್‌ಗಳನ್ನು ಕಳೆದುಕೊಳ್ಳುವುದು. ಈ ಮೊದಲಾದ ಅಂಶಗಳನ್ನು ಗುರುತಿಸಬಹುದು. ಅಲ್ಲದೆ ಮೂಲ ದ್ರಾವಿಡಕ್ಕೆ ಕಲ್ಪಿಸಿಕೊಂಡಿರುವ ಅಯ್ ಇದು ಕನ್ನಡದಲ್ಲಿ ಮುಕ್ತ ಬೆಳವಣಿಗೆಯನ್ನು ತನ್ನದಾಗಿಸಿಕೊಂಡಿದೆ. ಈ ನಿಟ್ಟಿನಲ್ಲಿ

ಕನ್ನಡವು ಮೂರು ಬಗೆಯ ಬೆಳವಣಿಗೆಯನ್ನು ಮಾಡಿಕೊಂಡಿದೆ. ಅ ಕೊನೆ, ಇ ಕೊನೆ, ಮತ್ತು ಎ ಕೊನೆ. ಆದರೆ ತಮಿಳು ಮೂಲ ರೂಪವನ್ನೇ ಉಳಿಸಿಕೊಂಡಿದೆ.

ಮೂಲದ (ಮೈ/ಮ) - ಮನೆ ಎಲೆ > ಯೆಳೆ

ತಮಿಳ - ಮನಯ್ ಇಲಯ್

ಚಾಮರಾಜನಗರ ಕನ್ನಡದಲ್ಲಿ ಅಯ್ ಕೊನೆಗೊಳ್ಳುವ ಪದಗಳಲ್ಲಿ ಕೆಲವರ (ಹರಿಜನರ) ಮಾತಿನಲ್ಲಿ ಯ್ ಕಳೆದುಕೊಂಡು (ಯ > ø) ಅ ಆಗುತ್ತದೆ(ಬಟ್ಟ, ೨೦೦೭-೯೮ ಮತ್ತು ೧೯೫೫-೬೮). ಕೆಲವು ಸಂದರ್ಭಗಳಲ್ಲಿ ಅಥವಾ ಕೆಲವು ಸಾಮಾಜಿಕ ವರ್ಗಗಳು ಮೂಲವನ್ನೇ ಬಳಸಿಕೊಳ್ಳುತ್ತಿವೆ. ಶಂಕರ ಬಟ್ಟರೂ ಕನ್ನಡದಲ್ಲಿ ಎ ಕೊನೆಗಳು ಇ ಕೊನೆಯಾಗುತ್ತವೆಂದು ಹೇಳುತ್ತಾರೆ(ಅದೇ ೮೬). ಆದರೆ ಕೊಡಗುಂಟಿಯವರು (೨೦೧೧) ಇದನ್ನು ಒಪ್ಪುವುದಿಲ್ಲ. ಅವರ ಪ್ರಕಾರ ಮೂಲಕ್ಕೆ ಕಲ್ಪಿಸಿಕೊಂಡಿರುವ ಅಯ್ ಇದು ಒಂದು ಸಂಧ್ಯಾಕ್ಷರವಾಗಿದ್ದು ಇದಕ್ಕೆ ಅ , ಇ ಮತ್ತು ಎ ಈ ಮೂರು ಧ್ವನಿಗಳತ್ತ ತಿರುಗುವ ಸರಳ ಸಾಧ್ಯತೆಯಿದೆ. ಹೀಗೆ ತಿರುಗುವುದೆ ಈ ಮೂರು ಕನ್ನಡದಲ್ಲಿ ಬಂದಿವೆ ಎನ್ನುತ್ತಾರೆ.

ಮೂಲ ದಕ್ಷಿಣ ದ್ರಾವಿಡ ಇಲ್ಲವೆ ಮೂಲ ದ್ರಾವಿಡ ವ್ಯಂಜನ ಕೊನೆಗಳನ್ನು ಕನ್ನಡ ಬೇರೆಯದ್ದೇ ರೀತಿಯಲ್ಲಿ ಬೆಳೆಸಿಕೊಂಡಿದೆ. ನಾಟ್ ದಂತಹ ಮೂಲ ದ್ರಾವಿಡ ರೂಪಕ್ಕೆ ಮಲೆಯಾಳಂ ಒತ್ತಕ್ಷರ ಬೆಳೆಸಿಕೊಂಡರೆ ಕನ್ನಡವು ಘೋಷಧ್ವನಿಯನ್ನು ಬೆಳೆಸಿಕೊಂಡಿದೆ.

ಮೂಲ ದ್ರಾವಿಡ - * ನಾಟ್* ಕಾಟ್

ಕನ್ನಡ - ನಾಡು ಕಾಡು

ಮಲೆಯಾಳಂ - ನಾಟ್ಟು ಕಾಟ್ಟು

ಇದಕ್ಕೆ ತದ್ವಿರುದ್ಧವಾಗಿ *ಕಲ್ ದಂತಹ ರೂಪಗಳಲ್ಲಿ ಕನ್ನಡ ಒತ್ತಕ್ಷರ ಬೆಳೆಸಿಕೊಂಡರೆ ತಮಿಳು ಹಾಗೆಯೇ ಉಳಿಸಿಕೊಂಡಿದೆ.

ಮೂಲ ದ್ರಾವಿಡ -* ಕಲ್ ಮಣ್

ಕನ್ನಡ - ಕಲ್ಲು ಮಣ್ಣು

ತಮಿಳು - ಕಲ್ ಮಣ್ ಇತ್ಯಾದಿ

ಕನ್ನಡವು ಘೋಷಧ್ವನಿಗಳನ್ನು ಯಾವುದೇ ನಿರ್ಬಂಧಗಳಿಲ್ಲದೆ ಬೆಳೆಸಿಕೊಂಡಿದೆ. ತಮಿಳು ನಿರ್ಬಂಧ ಹೊಂದಿದೆ. ತೆಲುಗು ಕೂಡ ಕನ್ನಡದಂತಹದ್ದೆ ಬೆಳವಣಿಗೆ ಮಾಡಿಕೊಂಡಿದೆ. (ಕೊಡಗುಂಟಿ, ೯)

ಮೂಲ ದ್ರಾವಿಡ - * ಕಿನಾಯ್

ಕನ್ನಡ - ಗಿಣಿ / ಗಿಳಿ

ತಮಿಳು - ಕಿಣಿ

ಆಕೃತಿಮಾತ್ಮಕ ಅಂಶಗಳಲ್ಲು ಕನ್ನಡವು ಉಳಿದ ದ್ರಾವಿಡ ಭಾಷೆಗಳಿಗಿಂತ ಭಿನ್ನ ಬೆಳಣಿಗೆಯನ್ನು ಬೆಳೆಸಿಕೊಂಡಿದೆ. ಇಲ್ಲಿ ಮೂಲ ದ್ರಾವಿಡದ ಕೆಲವು ಕನ್ನಡಕ್ಕೆ ಪೂರಕವಾದ ಬದಲಾವಣೆಗಳನ್ನು ಪ್ರಾಥಮಿಕವಾಗಿ ವಿವೇಚಿಸಲಾಗಿದೆ. ಸುದಿರ್ಘ ವಿವರಣೆ ಅಧ್ಯಯನಕ್ಕೆ ಭಾರವಾಗಬಲ್ಲದು.

*** ಮೂಲ ಕನ್ನಡ**

ಮೂಲ ಕನ್ನಡ ಎಂಬ ಪರಿಕಲ್ಪನೆಯು ಕನ್ನಡ ವಿದ್ವಾಂಸರಿಗೆ ಇತ್ತೀಚಿನ ದಿನಗಳವರೆಗೂ ಬಂದೆಯಿಲ್ಲ. ಕನ್ನಡದ ಹುಟ್ಟು ಬೆಳವಣಿಗೆ, ಪ್ರಭಾವ ಪರಿಣಾಮ ಇವುಗಳ ಬಗ್ಗೆಯೇ ಅಧ್ಯಯನಗಳು ನಡೆದುಬಂದಿವೆ. ಮೂಲ ಕನ್ನಡದ ಪರಿಕಲ್ಪನೆಯನ್ನು ಕನ್ನಡದಲ್ಲಿ ಕಂಡವರು ಶಂಕರಬಟ್ಟರು (೧೯೯೯) ಇತ್ತಿಚಿಗೆ ಬಸವರಾಜ ಕೊಡಗುಂಟಿ (೨೦೧೨) ಷ ಶೆಟ್ಟರ ಇವರನ್ನು ಹೆಸರಿಸಬಹುದು, ಶೆಟ್ಟರ ಈ ನಿಟ್ಟಿನಲ್ಲಿ ತಮ್ಮ ಶಂಗಂ ತಮಿಳಗಂ ಕನ್ನಡ ನಾಡು ನುಡಿಯಲ್ಲಿ ಇದಕ್ಕೆ ಪೂರಕವಾದ ಕೆಲವು ಅಂಶಗಳನ್ನು ಪ್ರಸ್ಥಾಪಿಸುತ್ತಾರೆ.

ಕನ್ನಡದ ಉಗಮದ ಬಗ್ಗೆ ಈಗ ನಮಗಿರುವ ತಿಳುವಳಿಕೆ ಪ್ರಕಾರ ಎರಡು ಸಾವಿರ ವರ್ಷ. ಕೊಡಗುಂಟಿಯವರು ಇದು ನಾಲ್ಕು ಸಾವಿರ ವರ್ಷಗಳಿಗಿಂತ ಹಿಂದೆಯೇ ಆಗಿರಬೇಕೆನ್ನುತ್ತಾರೆ. ಮೂಲ ದ್ರಾವಿಡದಿಂದ ದಕ್ಷಿಣ ದ್ರಾವಿಡ ಕವಲೊಡೆದಿದ್ದು ಕ್ರಿ.ಪೂ. ೧-೨ ಮಿಲಿಯಮ್ ವರ್ಷಗಳ ಹಿಂದೆ. ಪೂರ್ವ ತಮಿಳುವಿನ ಕಾಲ ಕ್ರಿ.ಪೂ. ೬೦೦ರಿಂದ ೪೦೦ರ ತೆದಿಯನ್ನು ಗುರುತಿಸಬಹುದು. (ಶಿವಾನಂದ ವಿ. ೧೯೯೯, ೬) ಈ ಕಾಲಗಳನ್ನು ಪರಿಗಣನೆಗೆ ತೆಗೆದುಕೊಂಡರೆ, ಕನ್ನಡವು ಮೂಲ ದಕ್ಷಿಣ ದ್ರಾವಿಡದಿಂದ ಕವಲೊಡೆದಾಗಲೇ ತನ್ನ ಬೆಳವಣಿಗೆಯನ್ನು ಕಟ್ಟಿಕೊಳ್ಳುವಲ್ಲಿ ನಿರತವಾಗಿರ ಬೇಕೆಂದು ಊಹಿಸಬಹುದು. ನಾಲ್ಕೈದು ಸಾವಿರ ವರ್ಷಗಳ ಹಿಂದೆ ದಕ್ಷಿಣ ದ್ರಾವಿಡವೇ ಬಳಕೆಯಲ್ಲಿದ್ದಿರಬೇಕು. ತುಳು, ಕೊರಗ, ಕನ್ನಡ ಇಂತಹ ನುಡಿಗಳು ಅನೇಕ ಸ್ವತಂತ್ರ ಅಂಶಗಳೊಂದಿಗೆ ಬಳಕೆಯಲ್ಲಿರುವ ಸಾಧ್ಯತೆ ಸ್ಪಷ್ಟವಾಗಿದೆ (ಕೊಡುಗುಂಟಿ ೨೦೧೧, ೧೧) ಇಂದಿನ ಕನ್ನಡದ ಒಳನುಡಿಗಳ ಸ್ವರೂಪ ನೋಡಿದರೆ ಅದು ಸರಿ ಎನಿಸುತ್ತದೆ. ಇಂದು ಕನ್ನಡಿಗರು ಆಡುವ ಭಾಷೆಯನ್ನು ಕನ್ನಡವೆಂದು ಗುರುತಿಸಿದರೂ ಅದರಲ್ಲಿನ ಅನೇಕ ಒಳನುಡಿಗಳು ತಮ್ಮ ಸ್ಪಷ್ಟ ಸ್ವತಂತ್ರ ರಚನೆಗಳೊಂದಿಗೆ ಬಳಕೆಗೊಳ್ಳುತ್ತಿವೆ. ಇಂಥದ್ದೇ ಪರಿಸ್ಥಿತಿ ಆಗ ಮೂಲ ದಕ್ಷಿಣ ದ್ರಾವಿಡದಲ್ಲಿದ್ದ ಭಾಷೆಗಳದ್ದಾಗಿರಬೇಕು. ಈ ಅಂಶಗಳು ಮೂಲ ಕನ್ನಡದ ಕಲ್ಪನೆಯನ್ನು ನಾಲ್ಕು ಸಾವಿರ ವರ್ಷಗಳಷ್ಟು ಹಿಂದೆ ಕಾಣಲು ಆಧಾರವಾಗುತ್ತವೆ. ಇದರ ಬಗ್ಗೆ ಇನ್ನಷ್ಟು ಅಧ್ಯಯನಗಳು ಬಂದರೆ ಈ ವಾದ ಬಲಗೊಳ್ಳಬಲ್ಲದು.

ಮೂಲ ಕನ್ನಡವನ್ನಾಡುವ ಜನರು ಎಲ್ಲಿ ವಾಸಿಸುತ್ತಿದ್ದರು. ಈ ಪ್ರಶ್ನೆಗೆ ಉತ್ತರವಾಗಿ ದ್ರಾವಿಡ ಮಟ್ಟದಲ್ಲಿ, ಕನ್ನಡ ಮಟ್ಟದಲ್ಲಿ ಅನೇಕ ಅಧ್ಯಯನಗಳು ಬಂದಿವೆ. (ಶಂಬಾ, ಎಡೆಗಳೂ ಹೇಳುವ ಕಂನಾಡ ಚರಿತ್ರೆ, ಕನ್ನಡದ ನೆಲೆ ಮೊದಲಾದವುಗಳು, ಶೆಟ್ಟರ ಶಂಗಂ ತಮಿಳಗಂ ಕನ್ನಡ ನಾಡುನುಡಿ)

ಇಂದು ಕನ್ನಡದಲ್ಲಿ ಬಳಕೆಯಲ್ಲಿರುವ ಎಲ್ಲಾ ಸ್ವರಗಳು ಮೂಲ ಕನ್ನಡದಲ್ಲಿದ್ದವು. ಇಂದು ಅನ್ಯ ಭಾಷೆಗಳ ಮುಖ್ಯವಾಗಿ ಇಂಗ್ಲಿಷ್ ಪ್ರಭಾವದಿಂದ ಕನ್ನಡಕ್ಕೆ ಸೇರಿಕೊಂಡಿವೆ ಎಂದು ಗುರುತಿಸಲಾಗುವ ಆ್ಯ ಮತ್ತು ಆ್ಯ ಸ್ವರಗಳೂ ಮೂಲ ಕನ್ನಡದಲ್ಲೇ ಇದ್ದಿರಬೇಕು(ಕೊಡಗುಂಟಿ ೨೦೧೧, ೧೭). ಇದರ ನಿಷ್ಪತ್ತಿಯನ್ನು ಹೀಗೆ ಹೇಳುತ್ತಾರೆ. *ಮೇ ಎಂಬ ಮೂಲ ಕನ್ನಡದ ರೂಪವು ಬೇರೆ ಬೇರೆ ಕನ್ನಡದಲ್ಲಿ ಬೇರೆ ಬೇರೆ ರೂಪ ಪಡೆದುಕೊಂಡಿದೆ.

ಬರಹದ ಕನ್ನಡ - ಮೇಲೆ

ಉತ್ತರದ ಕನ್ನಡ - ಮ್ಯಕ, ಮ್ಯಾಗ

ದಕ್ಷಿಣದ ಕನ್ನಡ - ಮ್ಯಾಲೆ

ಇಲ್ಲಿ *ಮೇ ರೂಪಕ್ಕೆ *ಅಲ್ *ಆಲ್ ರೂಪ ಮತ್ತು *ಅಕ್ *ಆಕ್ ರೂಪ ಬಂದು ಸೇರಿದಾಗ ಮೂಲದ ಎ ಸ್ವರವು ಆ್ಯ ಸ್ವರವಾಗಿ ಬದಲಾಗಿದೆ. ಇದನ್ನು ಅವರೂ ಮೂಲ ಕನ್ನಡದಲ್ಲೇ ನಡೆದ ಪರಿವರ್ತನೆಯೆಂದು ಹೇಳುತ್ತಾರೆ. ಏಕೆಂದರೆ ಅಕ್ ರೂಪವು ಪೂರ್ವ ಹಳೆಗನ್ನಡ ಕಾಲಕ್ಕೆನೇ ಸ್ವತಂತ್ರ ಬಳಕೆಯಿಂದ ಬಿದ್ದುಹೊಗಿತ್ತು. ಇಂದೂ ಇದು ಕೇವಲ ವಿಭಕ್ತಿ ಪ್ರತ್ಯಯವಾಗಿ ಕೆಲವು ಕನ್ನಡದಲ್ಲಿ ಬಳಕೆಯಲ್ಲಿದೆ. ಇನ್ನು ಹ್ರಸ್ವ ಆ್ಯ ಇದು ಧಾರವಾಡ, ಗುಲಬರ್ಗಾ ಕನ್ನಡದಲ್ಲಿ ಬಳಕೆಯಾಗುವ ಗ್ಯಣ್ಯ (ಗೆಳೆಯ)ದಲ್ಲಿ ಗುರುತಿಸಬಹುದು.

* ವ್ಯಂಜನಗಳ ವಿಷಯಕ್ಕೆ ಬಂದರೆ ಮೂಲ ಕನ್ನಡದಲ್ಲಿ

ಕ್, ಜ್

ಚ್, ಞ್

ಟ್, ಣ್

ತ್, ನ್

ಪ್, ಮ್

ಯ್, ವ್, ಲ್, ಳ್, ಟ್, ರ್ ಱ್, ಸ್, ವ್ಯಂಜನಗಳು ಬಳಕೆಯಲ್ಲಿದ್ದವು. ಇದರೊಂದಿಗೆ ೞ್ , ನ್ , ಎಂಬ ಧ್ವನಿಮಾಗಳು ಇದ್ದವೆಂದು ಗುರುತಿಸಲಾಗಿದೆ. ಆದರೆ ಇಂದು ನ್ ಧ್ವನಿಮಾ ಧಾರವಾಡ ಕನ್ನಡದ ಬಾಗಲಕೋಟೆ ಪರಿಸರದಲ್ಲಿ ಅರ್ಥಬೇಧಕ ಗುಣ ಕಳೆದುಕೊಂಡು

ಧ್ವನಿ ಮಾತ್ರವಾಗಿ ಬಳಕೆಯಲ್ಲಿರುವುದು ಈ ಪರಿಸರದಲ್ಲಿ ಹನಮಂತ (ಹಣಮಂತ), ಅನ್ನ(ಅಣ್ಣ)ಗಳಲ್ಲಿ, ಕಾಣಬಹುದು. ಇದು ತಮಿಳಿನಲ್ಲಿರುವ ಇನ್ನೊಂದು ನ್ ಮತ್ತು ಈ ನ್ ಮೂಲದಲ್ಲಿ ಒಂದೇ ಆಗಿರುವ ಸಂಭವವಿದೆ ಎಂದು ಅನುಮಾನಿಸಲಾಗಿದೆ. ಜ್ ಇದು ಒಂದು ಕಾಲಕ್ಕೆ ಲ್ , ಳ್ , ತ್ ಇವುಗಳ ಸಮಾನವಾಗಿ ಬಳಕೆಗೊಳ್ಳುತಿತ್ತು. ಇದರ ಸ್ಪಷ್ಟವಾದ ಬಳಕೆ ಕನ್ನಡ ದಲ್ಲಿ ಸಿಗುತ್ತದೆ. ಈ ಧ್ವನಿಗಳಿಂದಲೇ ಮೂಲ ದ್ರಾವಿಡದಲ್ಲಿ ಧ್ವನಿ ಒಡೆತ ಉಂಟಾಗಿ ಜ್ ಹುಟ್ಟಿಕೊಂಡಿರ ಬೇಕೆಂದು ಕೊಡಗುಂಟಿಯವರು ವಾದಿಸುತ್ತಾರೆ. (ಅದೇ ೧೪)

ಪೂರ್ವದ ಹಳೆಗನ್ನಡ, ಹಳೆಗನ್ನಡ ಕಾಲದಲ್ಲಿ ಸಿಗುವ * - ಆನ್ *ಆಲ್ *ಆಳ್, * - ಉನ್ * - ಉಲ್ * - ಉಳ್, * - ಇನ್ * - ಇಲ್ ರೂಪಗಳು (* - ಇಳ್ ರೂಪವು ಇರುವ ಸಾಧ್ಯತೆ ಇದೆ). ರೂಪಗಳೂ ಮೂಲ ಕನ್ನಡದಲ್ಲು ಇರುವ ಸಾಧ್ಯತೆಯಿದೆ. ಮೂಲ ಕನ್ನಡದಲ್ಲಿ ಘೋಷ ಧ್ವನಿಗಳು ಇರಲಿಲ್ಲ ಅಥವಾ ಕೆಲವು ಸೀಮಿತ ಪರಿಸರದಲ್ಲಿ ಮಾತ್ರ ಬಳಕೆಯಲ್ಲಿರ ಬಹುದೆನ್ನಬಹುದು (ಕೊಡಗುಂಟಿ, ೨೦೧೧).

*** ಮೂಲ ಕನ್ನಡ > ಗುಲಬರ್ಗಾ ಕನ್ನಡ**

ಮೂಲ ಕನ್ನಡವು ಕನ್ನಡವಾಗಿ ಬೆಳೆಯುವ ಹೊತ್ತಿಗಾಗಲೇ ಕನ್ನಡವು ತನ್ನ ಸ್ಪಷ್ಟ ಸ್ವರೂಪ ದೊಂದಿಗೆ ಕೆಲವು ಒಳನುಡಿಗಳನ್ನು ರೂಪಿಸಿಕೊಂಡಿರಬೇಕು. ಇದಕ್ಕೆ ನಿದರ್ಶನವಾಗಿ ಹಿಂದೆಯೇ ಹೇಳಿದಂತೆ * ಮೇ ಗೆ * ಅಕ್ / * ಆಕ್ ಸೆರಿ ಮ್ಯಾಕ / ಮ್ಯಾಗ , * ಅಲ್ * ಆಲ್ ಸೇರಿ ಮ್ಯಾಲ ಆಗುವುದು * ಆಕ್ ಇದು ಮೂಲ ಕನ್ನಡದ * ಅಕನ್ ರೂಪದ ಸ್ವರ ಕೊನೆಯ ರೂಪವಾಗಿದೆ. ಇದು ಪೂರ್ವದ ಹಳೆಗನ್ನಡ ಕಾಲಕ್ಕೇನೆ ಬಳಕೆಯಿಂದ ತಪ್ಪಿಹೋಗಿದೆ. ಹೀಗಾಗಿ ಕನ್ನಡವು ಸುಮಾರು ಎರಡು ಸಾವಿರ ವರ್ಷಗಳಷ್ಟು ಹಿಂದೆಯೇ ಒಳನುಡಿಗಳನ್ನು ಬೆಳೆಸಿಕೊಂಡಿತ್ತು ಎನ್ನಬಹುದು.

ಗುಲಬರ್ಗಾ ಮತ್ತು ಧಾರವಾಡ ಕನ್ನಡ ಮುಖ್ಯವಾಗಿ ಮೂಲ ದ್ರಾವಿಡ * ಅಯ್ ಕೊನೆ ರೂಪವನ್ನು ಇ ಕಾರ ಕೊನೆಯಾಗಿ ಮಾಡಿಕೊಂಡಿದೆ. ಉಳಿದ ಕನ್ನಡಗಳು ಎ ಮತ್ತು ಅ ಕೊನೆಯಾಗಿ ತೆಗೆದುಕೊಂಡಿವೆ.

ಮೂಲದ್ರಾವಿಡ - * ಇಲಯ್

ಬರಹದ ಕನ್ನಡ - ಎಲೆ

ಚಾಮರಾಜನಗರ ಕನ್ನಡ - ಎಲ > ಯಲ

ಗುಲಬರ್ಗಾ/ಧಾರವಾಡ ಕನ್ನಡ - ಎಲಿ > ಯೆಲಿ

ಮೂಲ ದ್ರಾವಿಡಕ್ಕೆ ಕಟ್ಟಬಹುದೆಂದು ಹೇಳಲಾಗಿರುವ ಹ್ ಧ್ವನಿಯನ್ನು ಉತ್ತರದ ಕನ್ನಡಗಳು ಮಾತ್ರ ಉಳಿಸಿಕೊಂಡಿವೆ. ಇದನ್ನು ಗುಲಬರ್ಗಾ ಮತ್ತು ಧಾರವಾಡ ಕನ್ನಡಗಳಲ್ಲಿ ಸ್ಪಷ್ಟವಾಗಿ ಕಾಣಬಹುದು.

| **ಬರಹದ ಕನ್ನಡ** | **ಗುಲಬರ್ಗಾ** | **ಧಾರವಾಡ** |
|---|---|---|
| ಇದ್ದಾಳೆ | ಹಳಾ | ಹಾಳ |
| ಇದ್ದಾನೆ | ಹನಾ | ಹಾನ |
| ಇದ್ದಾರೆ | ಹರಾ | ಹಾರ |

ಉಳಿದ ಕನ್ನಡಗಳಲ್ಲಿ ಈ ಪ್ರಕ್ರಿಯೆ ಕಂಡುಬರುವುದಿಲ್ಲ. ಇದರಂತೆಯೆ ಕನ್ನಡದಲ್ಲಿ ಪ>ಹ ಆಗುವ ಪ್ರಕ್ರಿಯೆಯು ಹಳೆಗನ್ನಡ ಕಾಲಕ್ಕೆನೆ ನಡೆದುಹೋಗಿದೆ. ಇಂದು ಇದು ಕೆಲವು ಕನ್ನಡ ಒಳನುಡಿಗಳಲ್ಲಿ ಹ > ø ಈ ಪ್ರಕ್ರಿಯೆಗೆ ಮುಂದುವರೆದಿದೆ. ಆದರೆ ಧಾರವಾಡ ಸೇರಿದಂತೆ ಗುಲಬರ್ಗಾ ಕನ್ನಡದಲ್ಲಿ ಈ ಬದಲಾವಣೆ ನಡೆದಿಲ್ಲ.

| | |
|---|---|
| ಮೂಲ ದ್ರಾವಿಡ - | * ಹಾಲ್ |
| ಬರಹದ ಕನ್ನಡ - | ಹಾಲು |
| ಧಾರವಾಡ/ಗುಲಬರ್ಗಾ ಕನ್ನಡ - | ಹಾಲ |
| ಉಳಿದ ಕನ್ನಡ - | ಆಲು |

* ಮೂಲ ಕನ್ನಡಕ್ಕೆ ಕಟ್ಟಿಕೊಳ್ಳಬೇಕೆಂದಿರುವ ಅ್ಯ , ಆ್ಯ , ಧ್ವನಿಗಳು ಎಲ್ಲಾ ಕನ್ನಡಗಳಂತೆ ಗುಲಬರ್ಗಾ ಕನ್ನಡದಲ್ಲೂ ಕಾಣಬಹುದು.

| | |
|---|---|
| * ಆ್ಯ | * ಅ್ಯ |
| ಖ್ಯಾಲ (ಗಮನ) | ಕ್ಯರ (ಚಪ್ಪಲಿ) |
| | ಕ್ಯಂಚಗ (ಕೆಂಪಗೆ) |

ಅಲ್ಲದೇ ಕನ್ನಡದಲ್ಲಿ ವಿಶೇಷವಾಗಿ ಗುರುತಿಸಲಾಗಿರುವ ಸ್ವರ ಆ್ವ ಧಾರವಾಡ ಮತ್ತು ಗುಲಬರ್ಗಾ ಕನ್ನಡಗಳು ದೀರ್ಘದೊಂದಿಗೆ ಹ್ರಸ್ವ ಆ್ವ ವು ಹೊಂದಿರುವುದು ವಿಶೇಷ

| | |
|---|---|
| ಅ್ವ | ಆ್ವ |
| ಕ್ವಲ್ಲು | ಕ್ವಾಣಾ |

* ಸ್ವರಗಳ ಅನುನಾಶಿಕತ್ವವು ಉತ್ತರ ಕನ್ನಡಗಳಲ್ಲಿ ಸರ್ವೇ ಸಾಮಾನ್ಯ. ಇದಕ್ಕೆ ಮರಾಠಿಯ ಪ್ರಭಾವವೆಂದು ವಿವರಿಸಲಾಗಿದೆ. ಗುಲಬರ್ಗಾ ಕನ್ನಡವು ಅನುನಾಸಿಕತ್ವವನ್ನು ಸ್ಪಷ್ಟವಾಗಿ ಬಳಸಿ ಕೊಳ್ಳುತ್ತದೆ.

ಹಾಂವ (ಹಾವು)

ಕಾಂವ (ಕಾವು)

ಅಂವಾ (ಅವನು)

* ಗುಲಬರ್ಗಾ ಕನ್ನಡವು ಸರ್ವ ನಾಮಗಳಲ್ಲಿ ವಿಶಿಷ್ಟತೆಯನ್ನು ಬೆಳೆಸಿಕೊಂಡಿದೆ. ಬೀದರ, ಗುಲಬರ್ಗಾ, ವಿಜಾಪುರ, ಧಾರವಾಡ ಕನ್ನಡಗಳೂ ಈ ರೂಪವನ್ನು ಬಳಸುತ್ತವೆ.

| | ಬರಹದ ಕನ್ನಡ | ಗುಲಬರ್ಗಾ ಕನ್ನಡ |
|---|---|---|
| (ಸ್ತ್ರೀಲಿಂಗ) | ಆಕೆ > | ಅಕಿ, ಆಕಿ, ಕಕಿ |
| (ಪುಲ್ಲಿಂಗ) | ಅವನು > | ಅಂವ, ಆಂವ, ಕಂವ |
| | ಇವನು > | ಇಂವ, ಕಿಂವ |
| (ನಪುಂಸಕ) | ಅದು > | ಅದು, ಕದು, ಕಿದು, |

* **ದಿಗ್ವಾಚಕಗಳಿಗೆ**

ಅಲ್ಲಿ > ಕಲ್ಲಿ, ಕಲ್ಲೆ

ಇಲ್ಲಿ > ಕಿಲ್ಲಿ, ಕಿಲ್ಲೆ

ಆಕಡೆ > ಕಕಡಿ, ಕಕಾಡೆ

ಇಕಡೆ > ಕಿಕಡಿ, ಕಿಕಾಡೆ

* **ಪ್ರಮಾಣ ವಾಚಕಗಳಿಗೆ**

ಅಷ್ಟು - ಕಷ್ಟು > ಕಟ್ಟು

ಇಷ್ಟು - ಕಿಷ್ಟು > ಕೀಟ್ಟು

ಎಷ್ಟು - ಎಟು > ಎಚ್ಟು

* ಗುಲಬರ್ಗಾ ಕನ್ನಡದಲ್ಲಿ ಕೆಲವು ವಿಶಿಷ್ಟರೂಪದ ಪ್ರತ್ಯಯಗಳು ಬಳಕೆಯಲ್ಲಿವೆ.

ಕೇಸಿ > ಕೇಸಿಂದ ಮಾಡಕೇಸಿ ಬಾ (ಮಾಡಿಕೊಂಡ ಬಾ)

ಮಾರಕೇಸಿಂದ ಬಾ (ಮಾರಿಕೊಂಡು ಬಾ)

ಕೇರಿ (?)

ಅಪ್ಲೆ (ಅಂತೆ) ನಿನ್ನಪ್ಲೆ ನಾಯೆನು ದಡ್ಡಲ್ಲ

ಅಷ್ಟಗೆ > ಅಟ್ಗೆ (ಅಷ್ಟರಟಿಗೆ, ಏಕಿಗೆ)

ನಾ ಬರಟಗೆ ತಂದಿಡು (ನಾನು ಬರುವಷ್ಟರಲ್ಲಿಯೆ ತಂದಿಡು)

ಗುಲಬರ್ಗಾ ಕನ್ನಡದ ಬಗ್ಗೆ ಈ ಹಿಂದೆ ಅಧ್ಯಯನ ಮಾಡಿರುವ ವಿದ್ವಾಂಸರು ಗುಲಬರ್ಗಾ ಕನ್ನಡಕ್ಕೆ -ಕೇರಿ ಪ್ರತ್ಯಯವನ್ನು ಆರೋಪಿಸುತ್ತಾರೆ. ಇದು ಬಳಕೆಯ ಸಾಧ್ಯತೆ ಕಂಡುಬರುವುದಿಲ್ಲ ಅಥವಾ ಹಿಂದೆ ಬಳಕೆಯಲ್ಲಿದ್ದು ಈಗ ಬಿದ್ದು ಹೋಗಿರಬಹುದು. ಸದ್ಯದ ಮಟ್ಟಿಗಂತು ಈ ಪ್ರತ್ಯಯ -ಕೇರಿ ಗುಲಬರ್ಗಾ ಕನ್ನಡದಲ್ಲಿ ಬಳಕೆಯಲ್ಲಿಲ್ಲ. ಇದು ಧಾರವಾಡ, ಬಿಜಾಪುರ, ಬಾಗಲಕೋಟೆ ಕಡೆಯಲ್ಲಿ ಬಳಕೆಯಲ್ಲಿದೆ. ಗುಲಬರ್ಗಾ ಕನ್ನಡದಲ್ಲಿ -ಕೇಸಿ , -ಕೇಸಿಂದ್ ಬಳಕೆಯಲ್ಲಿದೆ.

* ಲ > ಳ್, ಸ > ಚ, ಚ > ಜ ಧ್ವನಿ ವ್ಯತ್ಯಾಸಗಳು ಸ್ವಚಂದವಾಗಿ ಪರಿವರ್ತನೆಯಾಗುವುದನ್ನ ಗುಲಬರ್ಗಾ ಕನ್ನಡದಲ್ಲಿ ಕಾಣಬಹುದು.

ಮುಂಜಾನೆ > ಮುಂಜಾನಿ > ಮುಂಜಾಲಿ > ಮಂಜಾಳಿ

ಧಬಾಲಿ > ಧಬಾಳಿ

ಸೆಂಜಿ > ಚೆಂಜಿ

ಸಜ್ಜಿ > ಚೆಜ್ಜಿ

ಇಣಚಿ > ಇಣಜಿ

ಇಣಚುಲಿ > ಇಂಚುಲಿ

* ಇವುಗಳೊಂದಿಗೆ ಗುಲಬರ್ಗಾ ಕನ್ನಡದಲ್ಲಿ ಉರ್ದುವಿನ - ಕಿ , - ಬಿ ಪ್ರತ್ಯಯಗಳು ಬಳಕೆಯಲ್ಲಿವೆ. ಮರಾಠಿ, ಉರ್ದು, ತೆಲುಗು ಭಾಷೆಗಳ ಪ್ರಭಾವದಿಂದ ಗುಲಬರ್ಗಾ ಕನ್ನಡವು ಅನೇಕ ಉರ್ದು, ಮರಾಠಿ ಪದಗಳನ್ನು ಬಳಸಿಕೊಳ್ಳುತ್ತಿದೆ. ಗುಲಬರ್ಗಾ ಕನ್ನಡದ ಬಗೆಗಿನ ತಿಳುವಳಿಕೆ ಇನ್ನೂ ಸಾಲದಾಗಿದೆ. ಅದರ ಬಗ್ಗೆ ನಡೆದ ಅಧ್ಯಯನಗಳು ಅಷ್ಟೊಂದು ಗಟ್ಟಿತನ ಹೊಂದಿಲ್ಲ. ಈ ಕನ್ನಡದ ಚಾರಿತ್ರಿಕ ಮೂಲ ಅಂಶಗಳ ಬಗ್ಗೆ ಅಧ್ಯಯನ ನಡೆಯಬೇಕಾಗಿದೆ.

ಆಗತಾನೆ ಕನ್ನಡಕ್ಕೆ ಮೊದಲ ಗ್ರಂಥ ನೀಡಿರುವ ನೆಲವು ಮೂಲ ಕನ್ನಡ ಕಾಲಕ್ಕೆ ಇದರ ಸ್ವರೂಪ ಎಂಥದ್ದು ಎಂದೂ ಅರಿತುಕೊಳ್ಳಲು ಸಹಾಯಕವಾಗಬಲ್ಲದು. ಮಹಾಪ್ರಾಣಗಳ ಮಾತು ಬಂದಾಗ ಉಳಿದ ಕನ್ನಡಗಳು ಅವುಗಳನ್ನು ಕಳೆದುಕೊಳ್ಳುತ್ತಿರುವಾಗ ಗುಲಬರ್ಗಾ ಕನ್ನಡವು ಅಲ್ಪಪ್ರಾಣಕ್ಕೂ ಮಹಾಪ್ರಮಾಣವಾಗಿ ಉಚ್ಛರಿಸುತ್ತಿರುವುದರ ಟೈಂ > ಠೈಮ್, ಕಬ್ಬ > ಖಬ್ಬ ಇತ್ಯಾದಿ) ಹಿಂದಿರುವ ಪ್ರಕ್ರಿಯೆಗಳೇನು ಎಂಬಂಥಹ ಸಂಗತಿಗಳೊಂದಿಗೆ ಇದರ ಮೂಲ ಸ್ವರೂಪದ ಅರಿವು ಆಗಬೇಕಾಗಿದ್ದು ತುರ್ತಾಗಿದೆ. ಗುಲಬರ್ಗಾ ಕನ್ನಡವೆಂದರೆ ಉರ್ದು ಮಿಶ್ರಿತ ಕನ್ನಡವೆಂದು ಹಣೆಪಟ್ಟೆ ಕಟ್ಟಲಾಗುತ್ತದೆ. ಕನ್ನಡವು ಎಷ್ಟು ಪ್ರಮಾಣದಲ್ಲಿ ಉರ್ದುವನ್ನು ತನ್ನದಾಗಿಸಿಕೊಂಡಿದೆ ಎನ್ನುವುದರ ಅಧ್ಯಯನ ನಡೆಯಬೇಕಾಗಿದೆ. ಗೋದಾವರಿವರೆಗೂ ಕನ್ನಡ ನಾಡಿದ್ದುದು ನಿಜವಾಗಿದ್ದರೆ ಆ ಪ್ರದೇಶದಲ್ಲಿದ್ದುದು ಯಾವ ಪ್ರಭೇದ, ಗುಲಬರ್ಗಾ ಕನ್ನಡ ಮರಾಠಿ ಮೇಲೆ ಯಾವ ಪ್ರಭಾವ ಬೀರಿದೆ. ಇವೆಲ್ಲ ಅಧ್ಯಯನವಾಗಬೇಕಾಗಿದೆ. ಆಗ ಮಾತ್ರ ಗುಲಬರ್ಗಾ ಕನ್ನಡದ ಗಟ್ಟಿ ತಿಳಿವು ಮೂಡಬಹುದು.

## ಅಧ್ಯಾಯ ಮೂರು

# ಗುಲಬರ್ಗಾ ಕನ್ನಡ ನುಡಿ : ಸ್ವೀಕೃತ ನಾಮಪದಗಳ ರಚನೆ

ಪ್ರತಿಯೊಂದು ಭಾಷೆಯ ಶ್ರೀಮಂತಿಕೆಯನ್ನು ಆ ಭಾಷೆಯ ಪದಕೋಶದಿಂದಲೇ ಗುರುತಿಸ ಬಹುದು. ಆ ಪದಗಳು ಸ್ವಭಾಷೆಯದ್ದಾಗಿರಬಹುದು. ಇಲ್ಲವೆ ಅನ್ಯ ಭಾಷೆಯಿಂದ ಸ್ವೀಕರಿಸಿದ್ದಾಗಿರುತ್ತದೆ. ಅವು ಬಳಕೆಗೊಳ್ಳುವ ಭಾಷೆಯ ಶ್ರೀಮಂತಿಕೆಯ ಪಾಲುದಾರರಾಗಿರುತ್ತವೆ. ಅದಕ್ಕೆ ಸಫೀರ ಹೇಳೋದು ಕೋಶಾಧಾರದ ಮೇಲಿಂದ ಭಾಷೆಯನ್ನು ಗುರುತಿಸುವ ಪ್ರಮಾದ ಭಾಷಾ ವಿದ್ಯಾರ್ಥಿ ಗಳದ್ದಾಗಿರಬಾರದು ಇದು ಭಾಷೆಯ ಪದ ಸಂಪತ್ತಿನ ಬಗ್ಗೆಯಾದರೆ, ಪದ ಸಂಪತ್ತಿನಲ್ಲಿರುವ ಪದಗಳನ್ನು ಅವುಗಳ ಬಳಕೆಯ ಅಥವಾ ಅವುಗಳು ಭಾಷೆಯಲ್ಲಿ ನಿರ್ವಹಿಸುವ ಕೆಲಸದಾಧಾರದ ಮೇಲೆ ವಿಭಾಗಿಸಿ ಗುರುತಿಸುವುದು ಪ್ರತಿ ಭಾಷೆಯಲ್ಲಿಯು ಇದೆ. ಅವುಗಳೆ ನಾಮಪದ, ಕ್ರಿಯಾಪದ, ಗುಣವಾಚಕ, ವಿಶೇಷಣ ಇತ್ಯಾದಿ. ಅವುಗಳಲ್ಲಿ ನಾಮಪದ ಹೆಚ್ಚಾಗಿದ್ದು, ಕ್ರಿಯಾ, ಗುಣ, ವಿಶೇಷಣಗಳು ನಾಮಪದಕ್ಕೆ ಸಹಾಯಕವಾಗಿ ಅಥವಾ ಒಂದು ವಿಷಯವನ್ನು ಪೂರ್ಣಗೊಳಿಸಲು ನಾಮಪದ ದೊಂದಿಗೆ ನಿಲ್ಲುವಂಥವುಗಳು.

ನಾಮಪದಗಳು ಒಂದು ಭಾಷೆಯ ಪದ ಸಂಪತ್ತಿನಲ್ಲಿ ಅತಿದೊಡ್ಡ ಪಾಲುದಾರರೆನ್ನಬಹುದೆನೊ, ಪ್ರತಿಯೊಂದು ಭಾಷೆಗೆ ಅವುಗಳೇ ಜೀವಾಳ. ಒಂದು ಅಂದಾಜಿನ ಪ್ರಕಾರ ನಾಮಪದಗಳಿಲ್ಲದ ಭಾಷೆಯೇ ಇರಲಿಕ್ಕಿಲ್ಲ. ನಾಮಪದಗಳು ಒಂದು ಭಾಷೆಯ ಅತೀ ಕ್ರಿಯಾಶೀಲ ಘಟಕಗಳು. ಅವು ಉಳಿದ ಘಟಕಗಳಿಂದ ಪದಗಳನ್ನು ಹೆಕ್ಕಿ ತಮ್ಮ ಗುಂಪಿಗೆ ಸೇರಿಸಿಕೊಳ್ಳಬಲ್ಲವಾಗಿರುತ್ತವೆ.

ಒಂದು ಭಾಷಾ ಸಮುದಾಯವು ಇನ್ನೊಂದು ಭಾಷೆಯಿಂದ ಪದಗಳನ್ನು ಸ್ವೀಕರಿಸುವ ಪ್ರಕ್ರಿಯೆಗೆ ಒಳಗಾಗುತ್ತಿದೆ ಅಥವಾ ಒಂದು ಭಾಷಿಕ ಸಮುದಾಯ ಇನ್ನೊಂದು ಭಾಷಿಕ ಸಮುದಾಯದ ಸಂಪರ್ಕದಲ್ಲಿ ನಿರಂತರವಾಗಿ ಇರುತ್ತಿದೆ. ಮತ್ತು ಅವರೊಂದಿಗೆ ಸಂವಹನ ಕ್ರಿಯೆಗೆ ಪದಗಳ

ಅವಶ್ಯಕತೆ ಬೀಳುತ್ತಿದೆಯೆಂದರೆ ಅದು ಮೊದಲು ನಾಮಪದಗಳದ್ದೆ ಆಗಿರುತ್ತದೆ. ಆನಂತರ ಬೆಳೆದು ಇತರ ಭಾಷಿಕ ಘಟಕಗಳಿಗೂ ಮುಂದುವರಿಯಬಹುದು. ಕೊಡವ ಭಾಷೆಯು ಕೂಡ ತನ್ನ ಭಾಷಾ ಘಟಕಗಳನ್ನು ಕೊಡುವಾಗ ನಾಮಪದಗಳಂತಹ ತೆರೆದ ಭಾಷಿಕ ಘಟಕಗಳನ್ನೆ ಬೇಗ ನೀಡುತ್ತದೆ.

ಒಂದು ಹೇಳಿಕೆಯ ಪ್ರಕಾರ ಒಂದು ಭಾಷೆ ಇನ್ನೊಂದು ಭಾಷೆಯಿಂದ ಪದಗಳನ್ನು ಸ್ವೀಕರಿಸುತ್ತಿದೆಯೆಂದರೆ ಅದರಲ್ಲಿ ನಾಮಪದಗಳೇ ಹೆಚ್ಚಾಗಿರುತ್ತವೆ ಎಂಬುದಾಗಿದೆ. ಒಂದು ವೇಳೆ ಬೇರೆ ಘಟಕ (ಕ್ರಿಯಾ, ವಿಶೇಷಣ) ಸ್ವೀಕರಿಸಿದ್ದರೂ ಅವು ನಾಮಪದದ ಒಂದು ಭಾಗವಾಗಿ ಬಂದು ಆನಂತರ ಸ್ವತಂತ್ರವಾಗಿರುತ್ತವೆ. ಸರ್ವನಾಮಗಳಂತು ಸ್ವೀಕರಣ ಆಗುವುದೇ ಇಲ್ಲ. ನಾಮಪದಗಳ ಮುಕ್ತ ವರ್ತನೆಯೇ ಈ ಪ್ರಕ್ರಿಯೆಗೆ ಮುಖ್ಯ ಕಾರಣವಾಗಿರುತ್ತದೆ.

ಕನ್ನಡ ಭಾಷಿಕ ಸಮುದಾಯವು ಕಾಲಕಾಲಕ್ಕೂ ಸ್ವೀಕರಣ ಮಾಡಿಕೊಂಡೆ ಬಂದಿದ್ದು ಸತ್ಯ. ಇಂತಹ ಪ್ರಕ್ರಿಯೆಯು ಗುಲಬರ್ಗಾ ಕನ್ನಡದ ಹೊರತಾಗಿಲ್ಲ. ಗುಲಬರ್ಗಾ ಕನ್ನಡವು ಮರಾಠಿ, ಉರ್ದು ಭಾಷೆಗಳಿಂದ ಪದಗಳನ್ನು ಸ್ವೀಕರಿಸಿಕೊಂಡಿರುವುದು ಅಪಾರ. ಗುಲಬರ್ಗಾ ಕನ್ನಡ ಸ್ವೀಕರಿಸಿಕೊಂಡಿರುವ ನಾಮಪದಗಳ ಸ್ವರೂಪ ನೋಡಿದಾಗ ಅವುಗಳಲ್ಲಿ ಹೆಚ್ಚಿನವು ತಮ್ಮ ಮೂಲ ರಚನೆಯನ್ನು ಕಳೆದುಕೊಂಡು ಕನ್ನಡ ರಚನೆಗೆ ಪರಿವರ್ತನೆ ಹೊಂದಿವೆ. ಮೂಲದ ಕ್ರಿಯಾಪಗಳು ಕೂಡ ಇಲ್ಲಿ ನಾಮಪದಗಳಂತೆ ವರ್ತಿಸುತ್ತಿರುವುದು ಕಾಣಬಹುದು. ಈ ಅಧ್ಯಾಯದಲ್ಲಿ ಸ್ವೀಕೃತ ನಾಮಪದಗಳ ರಾಚನಿಕ ಸ್ವರೂಪದ ಕುರಿತು ಒಂದಷ್ಟು ನೋಡಲಾಗಿದೆ.

**೩.೧. ಭಾಷಾ ವೈಜ್ಞಾನಿಕ ನೆಲೆಯಲ್ಲಿ ಪದಗಳ ವರ್ಗೀಕರಣ**

ಒಂದು ಭಾಷೆಯ ನಿಜವಾದ ಅಂತಸತ್ವ ತಿಳಿಯಬೇಕಾದರೆ ಆ ಭಾಷೆಯ ಆಂತರಿಕ ರಚನೆಯನ್ನು ಅರಿತುಕೊಳ್ಳುವುದು ಅತಿ ಅವಶ್ಯಕವಾಗಿರುತ್ತದೆ. ಆಗ ಮಾತ್ರ ಆ ಭಾಷೆಯನ್ನು ನಿಜ ಸ್ವರೂಪ ತಿಳಿಯುತ್ತದೆ. ಪದಗಳಲ್ಲಿನ ಧ್ವನಿ, ಧ್ವನಿಮಾ ಮತ್ತು ಆಕೃತಿ ಮಾತ್ಮಕ ಸ್ವರೂಪ ಈ ಹಂತಗಳನ್ನು ಅರಿತು ಒಂದು ಭಾಷೆಯ ಪದಗಳ ಕಟ್ಟಳೆಗಳನ್ನು ಕಂಡುಕೊಳ್ಳಬಹುದಾಗಿರುತ್ತದೆ. ಇಲ್ಲಿ ಗುಲಬರ್ಗಾ ಕನ್ನಡದಲ್ಲಿರುವ ಸ್ವೀಕೃತ ನಾಮಪದಗಳ ರಾಚನಿಕ ವರ್ಗೀಕರಣ ಮಾಡಲಾಗಿದೆ.

**೩.೧.೧. ಧ್ವನಿಮಾ ಹಂತ**

ಸ್ವೀಕೃತ ನಾಮಪದಗಳನ್ನು ಅವುಗಳ ಧ್ವನಿಗಳಿಗನುಗುಣವಾಗಿ ವರ್ಗೀಕರಿಸಿ ಅವುಗಳ ರಾಚನಿಕ ಸ್ವರೂಪವನ್ನು ಈ ಕೆಳಗಿನಂತೆ ವಿವರಿಸಬಹುದು. ಇಲ್ಲಿನ ಈ ಧ್ವನಿ ವಿಭಜನೆಯ ಪದಗಳನ್ನು ಈ ಹೊತ್ತಿನ ಬಳಕೆಯ ಸ್ವರೂಪದ ಮೇಲೆ ವಿವರಣಾತ್ಮಕ ಮಾದರಿಯಲ್ಲಿ ವಿಭಜಿಸಲಾಗಿದೆ. ಮುಂದಿನ ದಿನಗಳಲ್ಲಿ ಈ ವಿವರಣಾತ್ಮಕ ಮಾಹಿತಿಯನ್ನೇ ಸಾಮಾಜಿಕವಾಗಿ ಅಧ್ಯಯನ ಮಾಡಬಹುದಾಗಿದೆ.

೩.೧.೧.೧ ಸ್ವರದಿಂದ ಪ್ರಾರಂಭವಾಗುವ ಪದಗಳು

೩.೧.೧.೧.೧ *ಸ್ವ(ದಿ)+ವ್ಯ+ಸ್ವ*

ಆಣೆ (ಮ), ಆಯಿ (ಮ), ಊದ (ಉ)

೩.೧.೧.೧.೨ *ಸ್ವ+ವ್ಯ+ಸ್ವ(ದಿ)*

ಉಧೋ (ಮ)

೩.೧.೧.೧.೩ *ಸ್ವ+ವ್ಯ+ವ್ಯ+ಸ್ವ*

ಅಕ್ಲ, ಉದ್ರಿ (ಮ), ಉಲ್ಪಿ (ಉ)

೩.೧.೧.೧.೪ *ಸ್ವ+ವ್ಯ+ವ್ಯ+ಸ್ವ(ದಿ)*

ಉಲ್ಪಾ (ಉ)

೩.೧.೧.೧.೫ *ಸ್ವ(ದಿ)+ವ್ಯ(ಸ್ವ+ಸ್ವ+ವ್ಯ)*

ಐನ್, ಐಟ್ (ಉ)

೫.೧.೧.೧.೬ *ಸ್ವ+ವ್ಯ+ಸ್ವ+ವ್ಯ+ಸ್ವ*

ಅಗದಿ (ಮ), ಅಡತ (ಮ), ಇಲೆಚಿ (ಮ), ಅಮಿನ (ಉ)

೫.೧.೧.೧.೭ *ಸ್ವ+ವ್ಯ+ಸ್ವ(ದಿ)+ವ್ಯ+ಸ್ವ*

(ಮ) ಅಟಾಪ, ಉತಾರ, ಉಭಾರ

(ಉ) ಅನಾಜ, ಇರಾದೆ ಇಲಾಜ

೩.೧.೧.೧.೮ *ಸ್ವ(ದಿ)+ವ್ಯ+ಸ್ವ+ವ್ಯ+ಸ್ವ*

ಆಪಸ (ಉ)

೩.೧.೧.೧.೯ *ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ*

ಆಯಾರಿ (ಮ), ಆರಾಮ (ಮ), ಆಸಾಮಿ (ಉ)

೫.೧.೧.೧.೧೦ *ಸ್ವ+ವ್ಯ+ವ್ಯ+ಸ್ವ+ವ್ಯ+ಸ್ವ*

ಅಂದಾಜ (ಮ), ಅಂಗೂರ (ಉ)

೩.೧.೧.೧.೧೧ *ಸ್ವ+ವ್ಯ+ಸ್ವ+ವ್ಯ+ಸ್ವ(ದಿ)*

ಎಕಸಾ (ಉ)

೩.೧.೧.೧.೧೨ *ಸ್ವ+ವ್ಯ+ಸ್ವ(ದಿ)+ವ್ಯ+ಸ್ವ(ದಿ)*

ಇಸಾರಾ (ಉ)

೩.೧.೧.೧.೧೩ ಸ್ವ+ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ

ಅಜಾಬಾದ (ಮ), ಉಟಾಬೈಸ (ಉ)

೩.೧.೧.೧.೧೪ ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

(ಮ) ಅಟಗಾವ, ಉಪರಾಟೆ, ಎಕತಾರಿ

(ಉ) ಅಜಿವಾನ, ಅಮರಾಯಿ

೩.೧.೧.೧.೧೫ ಸ್ವ(ದಿ)+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

(ಮ) ಆಜುಬಾಜು, ಆಸಪಾಸ (ಉ)

೩.೧.೧.೧.೧೬ ಸ್ವ+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ

ಇಮಾರತ (ಉ), ಎಕಾಎಕಿ (ಉ), ಅನಾಮತ್ತ (ಉ)

೩.೧.೧.೧.೧೭ ಸ್ವ+ವ್ಯ+ವ್ಯ+ಸ್ವ(ದಿ)+ಸ್ವ+ವ್ಯ+ವ್ಯ+ಸ್ವ(ದಿ)

ಅಚ್ಚಾಉಚ್ಚಾ (ಉ)

೩.೧.೧.೧.೧೮ ಸ್ವ(ದಿ)+ವ್ಯ+ಸ್ವ+ವ್ಯ+ಸ್ವ+ವ್ಯ+ವ್ಯ+ಸ್ವ

ಊದಕಡ್ಡಿ (ಉ)

೩.೧.೧.೧.೧೯ ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ

ಅದಲಿಬದಲಿ (ಉ)

೩.೧.೧.೧.೨೦ ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)

ಅವಡಾಸವಡಾ (ಮ)

ಗುಲಬರ್ಗಾ ಕನ್ನಡದ ಸ್ವೀಕೃತ ನಾಮಪದಗಳಲ್ಲಿ ಸ್ವರದಿಂದ ಪ್ರಾರಂಭವಾಗುವ ನಾಮಪದಗಳು ಮೂರು ಧ್ವನಿಮಾಗಳಿಂದ ಪ್ರಾರಂಭವಾಗಿ ಹನ್ನೊಂದು ಧ್ವನಿಮಾಗಳವರೆಗೂ ಕೂಡಿ ಪದ ರಚನೆಯಾಗಿದ್ದು ಕಂಡುಬರುತ್ತದೆ. ಇವುಗಳಲ್ಲಿ ಅನೇಕ ಪದಗಳು ತಮ್ಮ ಮೂಲ ಪದ ರಚನೆಯನ್ನು ಮೀರಿ ಕನ್ನಡಕ್ಕೆ ಬದಲಾಗಿವೆ. ಈ ಪದಗಳಲ್ಲಿ ಅ ಮತ್ತು ಆ ಸ್ವರದಿಂದ ಪ್ರಾರಂಭವಾಗುವ ಪದಗಳು ಹೆಚ್ಚಾಗಿವೆ. ಉಳಿದಂತೆ, ಇ, ಎ, ಉ ಗಳಿಂದ ಪ್ರಾರಂಭವಾಗುವ ಪದಗಳಿವೆ. ಹ್ರಸ್ವ ಸ್ವರದಿಂದ ಪ್ರಾರಂಭವಾಗುವ ಪದಗಳೇ ಹೆಚ್ಚಾಗಿವೆ.

**೩.೧.೨. ವ್ಯಂಜನದಿಂದ ಪ್ರಾರಂಭವಾಗುವ ಪದಗಳು**

**೩.೧.೨.೧ ಎರಡಕ್ಷರ**

೩.೧.೨.೧.೧ ವ್ಯ+ಸ್ವ+ವ್ಯ+ಸ್ವ

(ಮರಾಠಿ) (ಉರ್ದು)

ಕಣ, ಖಟ, ಖಡು, ಧಗಿ ಖಡಿ, ಗರು, ಲಡಿ, ಥೊಡೆ

೩.೧.೨.೧.೨ *ವ್ಯ+ಸ್ವ(ದಿ)+ವ್ಯ+ಸ್ವ*

(ಮರಾಠಿ)

ಚಾಳಿ, ಜೋಲಿ, ಝೂರಿ, ಟೋಪಿ, ಟಾಕಿ, ಠೋಕ, ಡೋಲಿ, ದೌಡ, ಭಾಪ, ಪಾಣ್ಫಿ ರಾಡಿ, ವೈನಿ, ರಾಡಿ, ಶೌಕ, ಸಾಡೆ, ಹೌಸ್ಸಿ ಕಾಕಿ, ಪೈಕಿ

(ಉರ್ದು)

ಖಾಡಿ, ಗಾಡಿ, ಗಾದಿ, ಗೈರ, ಚಾಲು, ಚಾವಿ, ಥೈಲಿ, ದಾಮ, ಧಾಕ, ಲೂಟಿ, ಸೂಟಿ, ಹೌದ

೩.೧.೨.೧.೩ *ವ್ಯ+ಸ್ವ(ದಿ)+ವ್ಯ+ಸ್ವ(ದಿ)*

(ಮರಾಠಿ)

ಕಾಟಾ, ಕೈಮಾ, ಘಾಣಾ, ಜಾಗಾ ಫಾಜಾ, ಬಾವಾ, ಕಾಕಾ, ಬಾಬಾ, ದಾದಾ

(ಉರ್ದು)

ಛಾಪಾ, ನಾಲಾ, ಸಾಲಾ

೩.೧.೨.೧.೪ *ವ್ಯ+ಸ್ವ+ವ್ಯ+ಸ್ವ(ದಿ)*

(ಮರಾಠಿ)

ಖವಾ, ಖುನಾ, ಝುಗಾ, ನಳಾ, ನಿಗಾ ಭಲೇ ಸಳೈ

೩.೧.೨.೧.೫ *ವ್ಯ+ಸ್ವ+ವ್ಯ+ವ್ಯ+ಸ್ವ*

(ಮರಾಠಿ)

ಕಮ್ಮ, ಗಚ್ಚ, ಛತ್ರಿ, ಜಪ್ತಿ ಟಿಮ್ಮ, ದೇಣ್ಯ, ಗುಂಗ, ಪುಂಗಿ

(ಉರ್ದು)

ಕುಂಚಿ, ಗಪ್ಪ, ಗಬ್ರು, ಗಲ್ಲಿ, ಗರ್ಮಿ ಗುಗ್ಗು, ಚುಕ್ತಾ, ಛತ್ತ, ಡೆಬ್ಬಿ, ಡೊಂಗಿ, ಲಂಬು

೩.೧.೨.೧.೬ *ವ್ಯ+ಸ್ವ+ವ್ಯ+ವ್ಯ+ಸ್ವ(ದಿ)*

(ಮರಾಠಿ)

ಖಡ್ಯಾ, ಖಿಲ್ಯಾ, ಕಿಸ್ಯಾ, ಪನ್ನಾ, ಬುಕ್ಕಾ, ಸವ್ವಾ, ಹುಂಡಾ

(ಉರ್ದು)

ಕಚ್ಚಾ, ಖುಲ್ಲಾ, ಗಲ್ಲಾ, ಡಬ್ಬಾ, ಪಕ್ಕಾ, ಬಿಲ್ಲಾ, ಸಸ್ತಾ, ಹಲ್ಕಾ

೩.೧.೨.೧.೭ *ವ್ಯ+ಸ್ವ(ದಿ)+ವ್ಯ+ವ್ಯ+ಸ್ವ*

| (ಮರಾಠಿ) | (ಉರ್ದು) |
| --- | --- |
| ಗೌಂಡಿ, ಥಾಂವ, ದೋತ್ರ | ಗಾಂಡು, ಡಾಂವ |

೩.೧.೨.೧.೮ *ವ್ಯ+ಸ್ವ(ದಿ)+ವ್ಯ+ವ್ಯ+ಸ್ವ(ದಿ)*

| (ಮರಾಠಿ) | (ಉರ್ದು) |
| --- | --- |
| ಥಾಂಡಾ | ಗಾಂಜಾ, ಬೀಡ್ಯಾ |

೩.೧.೨.೧.೯ *ವ್ಯ+ವ್ಯ+ಸ್ವ(ದಿ)+ವ್ಯ+ಸ್ವ*

| (ಮರಾಠಿ) | (ಉರ್ದು) |
| --- | --- |
| ನ್ಯಾರಿ, ಸ್ವಾಯಿ | ಖ್ಯಾಲ |

೩.೧.೨.೧.೧೦ *ವ್ಯ+ಸ್ವ+ವ್ಯ+ವ್ಯ+ವ್ಯ+ಸ್ವ*

ದಂದ್ಯಾ (ಮ)

೩.೧.೨.೧.೧೧ *ವ್ಯ+ಸ್ವ(ದಿ)+ವ್ಯ+ವ್ಯ+ವ್ಯ+ಸ್ವ(ದಿ)*

ಬಾಂಡ್ಯಾ (ಮ)

೩.೧.೨.೨ **ಮೂರಕ್ಷರ**

೩.೧.೨.೨.೧ *ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ*

| (ಮರಾಠಿ) | (ಉರ್ದು) |
| --- | --- |
| ಕಡಚಿ, ಖರಿದಿ, ಗಚಗಿ, ಗಡುಪ, ಗಿರಣಿ, ಚರಕಿ, ಝುಟಗಿ, ಜವುಳ, ಝಿಪರಿ, ಜುಮಕಿ, ಟಿಕಳಿ, ಠಸಗಿ, ಡಗುಳ, ಡಿಬರಿ, ಡುಮಕಿ, ಡರಕಿ, ತುಕಡಿ, ಧಮಕಿ, ಪಿಸವಿ, ಫರಸಿ, ಬುಕಣಿ, ಭಮಟಿ, ವಸುಲಿ, ಸಗಟ, ಸವಡ, ಹುಡದಿ, ಕಸುರ | ಗಜಲ, ಗಡುಪ, ಚಮಕ, ಪಯಲೆ ಬದಲಿ, ರಬಟಿ, |

೩.೧.೨.೨.೨ *ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ*

| (ಮರಾಠಿ) | (ಉರ್ದು) |
| --- | --- |
| ಕಾಳಜಿ, ಬಾರಿಕ, ಖಾನಗಿ, ದೇಣಗಿ, | ಕಾಯದಿ, ಖಾತರಿ, ಗಾಬರಿ, |

ಪಾವಡ, ಭಾವುಜಿ, ಭಾವುಗ, ತೇವಣಿ, ಮಾವಸಿ, ಮೋಜಣಿ, ಸಾಕಳಿ, ಧಾಮಣ್ಫಿ ವಾಜಮಿ

ತಾಯಿತ್ಪ ಪಾವತಿ, ಬೈಠಕ, ಲಾವಣಿ, ಧಾರಣಿ

೩.೧.೨.೨.೩ *ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ*

(ಮರಾಠಿ)

ಕರಾರ, ಖಿಲಾಡಿ, ಕಚೋರಿ, ಗದಾಡಿ, ಗದಾಡ, ಗಿರಾಕಿ, ಠಿಕಾಣಿ, ಠರಾವ, ತಪಾಸ, ತಲಾಟಿ, ತುಪಾನ, ದಬಾಸಿ, ದುಕಾನ, ಪುರಾಟ, ಝುಪಾಟಿ, ಪುಡಾರಿ, ಪುಟಾಣಿ, ತಿಜೋರಿ, ನಿಭಾಸು, ಬೊಗೋಣಿ, ಬರಾಟಿ, ಮಸಾರಿ, ಲತಾಡಿ, ಲಿಗಾಡ, ವಟಾಳಿ, ಹಕಾರಿ, ಸರಾಸಿ, ಲತಾಡಿ, ಹರಾಜ, ಹಮಾಲಿ, ನಿಕಾಲ.

(ಉರ್ದು)

ಕಟಾಯಿ, ಕಚೋರಿ, ಕಬಾಬ, ಕಮಾಯಿ, ಕಮಾಲ, ಖಿಲಾಡಿ, ಗಟಾರ, ಘೊಟಾಳಿ, ಛಟಾಕ, ಚಡಾವ, ಚಪಾತಿ, ಚಿಪಾಟಿ, ಪಗಾರ,ಪರಾಟ, ಪುಕಾರ, ಬಚಾವ, ಬಟಾಯಿ, ಹಜಾರ, ಬಯಾನಾ, ರಪಾಟೆ, ಲಗಾವ, ಹರಾಮ್ಖ ಛಿನಾಲಿ.

೩.೧.೨.೨.೪ *ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)*

(ಮರಾಠಿ)

ಪಕಳಾ, ಮಕರಾ, ವಟಗಾ

(ಉರ್ದು)

ಚಮಡಾ, ಜಲಸಾ

೩.೧.೨.೨.೫ *ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ*

(ಮರಾಠಿ)

ಚಾಪಾಣಿ, ದೇಸಾಯಿ, ಬೀಡಾರ, ಬೇಸಾನ

(ಉರ್ದು)

ಗೋಧಾಮ

೩.೧.೨.೨.೬ *ವ್ಯ+ಸ್ವ+ವ್ಯ+ವ್ಯ+ಸ್ವ+ವ್ಯ+ಸ್ವ*

(ಮರಾಠಿ)

ಪತ್ತುಲ, ಬಂಬಳ, ಕಿಮ್ಮತ, ಗೊಂಗಡಿ, ಗೊಂದುಲ, ಚುಂಗಡಿ, ಡಬ್ಬುಣ

(ಉರ್ದು)

ಗುಮ್ಮಟ, ಚಕ್ಕರ, ಚಪ್ಪಲ, ಜಠ್ರನೆ, ತುರಂತ, ಜುಲ್ಲುಸ

೩.೧.೨.೨.೭ ವ್ಯ+ಸ್ವ+ವ್ಯ+ಸ್ವ+ವ್ಯ+ವ್ಯ+ಸ್ವ

| (ಮರಾಠಿ) | (ಉರ್ದು) |
| --- | --- |
| ಕುರುಡ್ಗಿ, ಝುಕುಸ್ತ, ಮುರುಮ್ಮ | ಚಿಮುಟ್ಗಿ |

೩.೧.೨.೨.೮ ವ್ಯ+ಸ್ವ+ವ್ಯ+ವ್ಯ+ಸ್ವ(ದಿ)+ವ್ಯ+ಸ್ವ

| (ಮರಾಠಿ) | (ಉರ್ದು) |
| --- | --- |
| ಕಜ್ಜಾಳಿ, ಘಚ್ಚಾಗು, ಗೊಂಡಾಳಿ, ಝುಕ್ಕಾಸಿ ಬಿಲ್ವಾರ, ಹಪ್ಯಾಪಿ, ಚಿಂದಾಟಿ | ಪಂಚಾತಿ, ಗುಂಜಾಸ, ದುನ್ಯಾದೆ |

೩.೧.೨.೨.೯ ವ್ಯ+ಸ್ವ(ದಿ)+ವ್ಯ+ವ್ಯ+ಸ್ವ+ವ್ಯ+ಸ್ವ

(ಮ) ದಾಂದಲಿ, ದಾಂವತಿ, ಪಾಸಂಗ (ಉ)

೩.೧.೨.೨.೧೦ ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ(ದಿ)

ರೋಕಡಾ, ಶೇಕಡಾ (ಉ)

೩.೧.೨.೨.೧೧ ವ್ಯ+ಸ್ವ+ವ್ಯ+ವ್ಯ+ಸ್ವ+ವ್ಯ+ವ್ಯ+ಸ್ವ(ದಿ)

ಲಂಗಡ್ಯಾ (ಉ)

೩.೧.೨.೨.೧೨ ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ವ್ಯ+ಸ್ವ(ದಿ)

ಚೌರಸ್ತಾ (ಉ), ಪಾವಣ್ಯ (ಮ) ಪೈವಸ್ತಿ (ಮ)

೩.೧.೨.೩. ನಾಲ್ಕಕ್ಷರ

೩.೧.೨.೩.೧ ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ

| (ಮರಾಠಿ) | (ಉರ್ದು) |
| --- | --- |
| ಕಟಪಿಟಿ, ಗಪಚುಪ, ಚುರಮುರಿ ಡುಗಡುಗಿ, ಧಬಧಬಿ, ಧಡಪುಡ ಪುಗಸಟೆ, ಕಸವಿಸಿ | ಚಕಮಕಿ, ಪುಸಲತ, ಲವಲವ, ಹಿಕಮತ |

೩.೧.೨.೩.೨ ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ

| (ಮರಾಠಿ) | (ಉರ್ದು) |
| --- | --- |
| ಕಟಾಕಟಿ, ಖಡಾಖಡಿ | ಕಿತಾಪತಿ, ಬರಾಬರಿ |

೩.೧.೨.೩.೩ ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ

| (ಮರಾಠಿ) | (ಉರ್ದು) |
|---|---|
| ಕಾಟಗಾಯಿ, ಜಾಗರಾಣಿ | ತಾಜೆದಾಗ, ಬಾರದಾನಿ |
| ಬೋರಮಾಳ, ಸಾಗವಾನಿ, | |
| ಸಾವಕಾರ | |

೩.೧.೨.೩.೪ ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ

ಖಾನಾವಳಿ, ದೇಸಾವರಿ (ಮ) ಭಾನಾಮತಿ (ಉ)

೩.೧.೨.೩.೫ ವ್ಯ+ಸ್ವ+ವ್ಯ+ಸ್ವ+ವ್ಯ+ವ್ಯ+ಸ್ವ+ವ್ಯ+ಸ್ವ

ಕಲಂಗಡಿ (ಮ)

೩.೧.೨.೩.೬ ವ್ಯ+ಸ್ವ+ವ್ಯ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ಕೆಟ್ಟಚಾಳಿ, ಗಂಟಿಚೌಡಿ, ಗಾವಟಾಣ

೩.೧.೨.೩.೭ ವ್ಯ+ಸ್ವ+ವ್ಯ+ವ್ಯ+ಸ್ವ+ವ್ಯ+ಸ್ವ+ವ್ಯ+ವ್ಯ+ಸ್ವ

ಗೊಂದಾಲಗ್ಯಾ

೩.೧.೨.೩.೮ ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

| (ಮರಾಠಿ) | (ಉರ್ದು) |
|---|---|
| ಠಿಕಠಾಕ, ತತರಾಣಿ, ನಿಗರಾಣಿ | ಕುರಬಾನಿ,ಭರಪೂರ, ಸಮಜಾಸಿ |
| ಹಕನಾಕ, ತಪರಾಕಿ | ಬದಮಾಶ, ಮಜಬೂತ, ಪರೆಶಾನಿ |

೩.೧.೨.೩.೯ ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ವ್ಯ+ಸ್ವ

ದುರಮುಂಜಿ (ಮರಾ) ಕಟಮಸ್ತ (ಉ)

೩.೧.೨.೩.೧೦ ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ+ವ್ಯ+ವ್ಯ+ಸ್ವ

ಪಾವಬಂದ (ಮರಾ) ಸಾಡೆಸತ್ತಿ (ಉ)

೩.೧.೨.೩.೧೧ ವ್ಯ+ವ್ಯ+ಸ್ವ(ದಿ)+ವ್ಯ+ವ್ಯ+ಸ್ವ+ ವ್ಯ+ಸ್ವ+ವ್ಯ+ಸ್ವ

ಪ್ಯಾಂಟುಣಗಿ (ಮರಾ)

೩.೧.೨.೩.೧೨ ವ್ಯ+ಸ್ವ+ವ್ಯ+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ವ್ಯ+ಸ್ವ

ದಕ್ಕಾಮುಕ್ಕಿ (ಉ)

೩.೧.೨.೩.೧೩ ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ

ಬಾವಾಸಾಬ (ಮರಾ)

೩.೧.೨.೩.೧೪ ವ್ಯ+ಸ್ವ(ದಿ)+ವ್ಯ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ರಾಂಡಬಾಜ (ಮ), ಬಾಂಡವಾಲ (ಉ)

೩.೧.೨.೩.೧೫ ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ

ಕರಾರಪತ್ರ (ಉ)

೩.೧.೨.೩.೧೬ ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ

ಗೋರಗರಿಬ (ಮ), ಬಾದುರಗಡಿ (ಉ)

೩.೧.೨.೩.೧೭ ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ಜವಳಿಕಾಯಿ (ಮ)

೩.೧.೨.೩.೧೮ ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ಜಾಪಾಳಕಾಯಿ (ಮ), ಬಾಜಾರ ಬಾವ (ಉ)

೩.೧.೨.೩.೧೯ ವ್ಯ+ಸ್ವ+ವ್ಯ+ವ್ಯ+ಸ್ವ+ವ್ಯ+ಸ್ವ+ವ್ಯ+ವ್ಯ+ಸ್ವ(ದಿ)+ವ್ಯ+ಸ್ವ

ಹನ್ನಹುನ್ನಾರ (ಮ)

೩.೧.೨.೩.೨೦ ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ

ತಾಬುಡ ತೊಬುಡ (ಮ)

ಮರಾಠಿ, ಉರ್ದುವಿನಿಂದ ಗುಲಬರ್ಗಾ ಕನ್ನಡವು ಸ್ವೀಕರಿಸಿಕೊಂಡಿರುವ ವ್ಯಂಜನಾದಿ ಪದಗಳನ್ನು ಧ್ವನಿಮಾತ್ಮಕವಾಗಿ ಒಡೆದು ನೋಡಿದಾಗ ಈ ಮೇಲಿನ ರಚನೆಯುಳ್ಳ ಪದಗಳನ್ನು ಕಾಣುತ್ತವೆ. ಇವುಗಳಲ್ಲಿ ಅನೇಕ ಪದಗಳು ಕನ್ನಡ ರಚನೆಯು ಹೊರತಾಗಿವೆ. ದಂದ್ಯ, ದಾಂದಲಿ, ಪೈವಸ್ತಿ, ಲಂಗಡ್ಯಾ, ಪ್ಯಾಂಟುಣಗಿ, ದಕ್ಕಾಮುಕ್ಕಿ, ಇಂಥಹ ಗಮನಿಸುವಂತಹ ರಚನೆಯ ಪದಗಳು ಕನ್ನಡದ ಮಟ್ಟಿಗೆ ಒಂದಷ್ಟು ತೊಡಕಿನವೇ ಆಗಿವೆ. ಅಂದರೆ ಕನ್ನಡದಲ್ಲಿಲ್ಲ ಅಂತಲ್ಲ. ಕನ್ನಡ ಸಮಾಜವು ಪದಗಳನ್ನು ವ್ಯತ್ಯಯ ಮಾಡುವಲ್ಲಿ ಇಂತಹ ಸಂಕೀರ್ಣ ರಚನೆಯ ಪದಗಳು ಹಾಗೆ ಉಳಿದು ಬಿಟ್ಟಿವೆಯೇನೋ ಅನಿಸುತ್ತದೆ. ಧ್ವನಿಮಾತ್ಮಕ ವಿಭಾಗ ಕ್ರಮವು ಪದಗಳು ಯಾವ ಧ್ವನಿಗಳನ್ನು ಹೆಚ್ಚಾಗಿ ಬಳಸಿಕೊಳ್ಳುತ್ತಿವೆ ಎನ್ನುವುದನ್ನು ಅರಿಯಲು ಸಹಾಯಕವಾಗಿ ನಿಲ್ಲಬಲ್ಲವಾಗಿದೆ.

### ೩.೧.೩. ಸ್ವರದಿಂದ ಪ್ರಾರಂಭವಾಗುವ ಪದಗಳು

#### ೩.೧.೩.೧ ಹ್ರಸ್ವಸ್ವರ

##### ೩.೧.೩.೧.೧ ಎರಡಕ್ಷರ

| (ಮರಾಠಿ) | (ಉರ್ದು) |
|---|---|
| ಅಕ್ಲ | ಉದ್ರಿ |
| ಉದೋ | ಉಲ್ಪಾ |

##### ೩.೧.೩.೧.೨ ಮೂರಕ್ಷರ

| (ಮರಾಠಿ) | (ಉರ್ದು) |
|---|---|
| ಅಟಾಪ | ಅಂದಾಜ |
| ಅಗದಿ | ಅಂಗೂರ |
| ಅಡತ | ಅಗಾವ |
| ಅಬುರ | ಅನಾಜ |
| ಇಲೆಚಿ | ಇರಾದೆ |
| ಉಜಾಡ | ಇಲಾಜ |
| ಉಡಾಳ | ಇಸಾರಾ |
| ಉತಾರ | |

##### ೩.೧.೩.೧.೩ ನಾಲ್ಕಕ್ಷರ

| (ಮರಾಠಿ) | (ಉರ್ದು) |
|---|---|
| ಅಜಾಬಾದ | ಅಜಿವಾನ |
| ಅಟಗಾವ | ಅನಾಮತ್ತ |
| ಅಡಚಣ | ಅಮರಾಯಿ |
| ಅಚ್ಚಾಉಚ್ಚಾ | ಎಕಾಎಕಿ |
| ಇನಾಮಂತಿ | |
| ಇಮಾರತ | |
| ಉಪರಾಟೆ | |
| ಉಸಾಬರಿ | |

೩.೧.೩.೨ ಧೀರ್ಘಸ್ವರ

೩.೧.೩.೨.೧ ಎರಡಕ್ಷರ

| (ಮರಾಠಿ) | (ಉರ್ದು) |
|---|---|
| ಐನ್ | ಊಧ |

೩.೧.೩.೨.೨ ಮೂರಕ್ಷರ

| (ಮರಾಠಿ) | (ಉರ್ದು) |
|---|---|
| ಆಖರಿ | ಆಪಸ |
| ಆಯಾರಿ | ಆರಾಮ |
| ಊಭಾರ | ಆಸಾಮಿ |
| ಐನಾತಿ | ಏಕಸಾ |
| | ಏಕದಂ |

೩.೧.೩.೨.೩ ನಾಲ್ಕಕ್ಷರ

(ಮರಾಠಿ)

ಆಜುಬಾಜು

ಆಪಸಾತ

ಊಟಬೈಟ

೩.೧.೪ ವ್ಯಂಜನಾದಿಯಾಗಿ ಧೀರ್ಘಸ್ವರದಿಂದ ಪ್ರಾರಂಭವಾಗುವ ಪದಗಳು

೩.೧.೪.೧ ಎರಡಕ್ಷರ

| (ಮರಾಠಿ) | (ಮರಾಠಿ) | (ಉರ್ದು) | (ಉರ್ದು) |
|---|---|---|---|
| ಕಾಟಾ | ಖ್ಯಾಲ | ಖ್ಯಾಲ | ಖಾಲೆ |
| ಘಾಣ | ಚಾಳಿ | ಗಾಂಡು | ಗಾಂಜಾ |
| ಚಾಕಾ | ಜಾಗಾ | ಗಾಡಿ | ಚಾಲು |
| ಡಾಂವ | ತಾಂಡಾ | ಚಾಟಿ | ಛಾತಿ |
| ಥಾಟ | ಧಾಪ | ಛಾಪಾ | ಜಾಸ್ತಿ |
| ಧಾಡಿ | ನಾಕಾ | ಥ್ಹಾಡೆ | ದಾಮ |
| ಪಾಣಿ | ಪಾವ | ನಾಲಾ | ಧಾಕ |
| ಫಾಜಾ | ಪಾಳಿ | ಸೂಟಿ | ಬೀಡಾ |

| | | |
|---|---|---|
| ಭಾವ | ಭಾಂಡೆ | ಗ್ಯೆರಿ |
| ಭಾಡ್ಯಾ | ರಾಡಿ | ಥ್ಯೆಲಿ |
| ಸ್ಥಾಯಿ | ದೆಣ್ಯ | ಚೌಕ |
| ಕೈಮಾ | ವೈನಿ | ಶೇರ |
| ಕೋರ | ರೋಕ | ಚೈನಿ |
| ಡೋಲಿ | ಮೋರಿ | ಡೋಂಗಿ |
| ಗೌಂಡಿ | ದೌಡ | ಹೌದ |

### ೩.೧.೪.೨ ಮೂರಕ್ಷರ

| (ಮರಾಠಿ) | (ಮರಾಠಿ) | (ಉರ್ದು) | (ಉರ್ದು) |
|---|---|---|---|
| ಕಾಳಜಿ | ಚಾಪಾಣಿ | ಕಾಯಿದ್ಯಾ | ಬೀಡಾರ |
| ಜಾಬಾದ | ಜಾವಳ | ಪಾವತಿ | ಬೇಸಾನ |
| ಟಾಚಣಿ | ಪಾವಡ | ಲಾವಣಿ | ಬೈಕಾಕ |
| ಪಾವಣೆ | ಪಾವಣ್ಯಾ | ಫೇರಾವ | |
| ಭಾವುಗ | ಬಾರಿಕ | ಶೇಕಡಾ | |
| ಮಾವಸಿ | ಸಾಕಗಳಿ | ತಾಯಿತ | |
| ವೈವಾಟ | ಗೋಂಡಾಳಿ | ಪಾಸಂಗ | |
| ಬೋಣಗಿ | ಮೋಜಣಿ | ಬಾದಲಿ | |
| ಚೌರಸ್ತ | | | |

### ೩.೧.೪.೩ ನಾಲ್ಕಕ್ಷರ

| (ಮರಾಠಿ) | (ಉರ್ದು) |
|---|---|
| ಕಾರಬಾರಿ | ಕಾಟಗಾಯಿ |
| ಖಾನಾವಳಿ | ಬಾಂಡವಾಲ |
| ಖಾಸಗತ | ಬಾವಾಸಾಬ |
| ಜಾಗರಾಣೆ | ಬಾರದಾನಿ |
| ತಾಡಪತ್ರಿ | ದೇಶಾವರ |
| ಪಾಂಚವರಿ | |

ಪಾನಪಟ್ಟಿ

ಪ್ಯಾಂಟುಣಗಿ

ಸಾಗವಾನಿ

ದೇಶಮುಖ

ಗೌಂವಟಾಣ

೩.೧.೪.೪ ಐದಕ್ಷರ

| (ಮರಾಠಿ) | (ಉರ್ದು) |
|---|---|
| ಜಾಪಾಳಕಾಯಿ | ಬಾಜಾರಭಾವ |
| ಬಾದುರಗಡಿ | ಗೋರಗಂಬ |

೩.೧.೫ ಪದಮಧ್ಯ ದೀರ್ಘಸ್ವರದಿಂದ ಕೂಡಿರುವ ಪದಗಳು

೩.೧.೫.೧ ಮೂರಕ್ಷರ

| (ಮರಾಠಿ) | (ಮರಾಠಿ) | (ಉರ್ದು) | (ಉರ್ದು) |
|---|---|---|---|
| ಅಟಾಪ | ಇರಾದಿ | ಅಂದಾಜ | ಅಗಾವ |
| ಉಜಾಡ | ಉಡಾಳ | ಅನಾಜ | ಅವಾಜ |
| ಉತಾರ | ಉಭಾರ | ಆಪಸ | ಆರಾಮು |
| ಕಜ್ಜಾಳಿ | ಕರಾರ | ಆಸಾಮಿ | ಇರಾದಾ |
| ಕಿರಾಣಿ | ಖಿಲಾಡಿ | ಇಸಾರಾ | ಕಟಾಯಿ |
| ಖಟಾರಾ | ಗಚ್ಚಾಗು | ಕಬಾಬ | ಕಮಾನ |
| ಗದಾಡಿ | ಗಿರಾಕಿ | ಕಮಾಯಿ | ಕಮಾಲ |
| ಗೋಂಡಾಳಿ | ಚಾಪಾಣಿ | ಕಿಲಾಡಿ | ಗಟಾರ |
| ಜಾಬಾದ | ಜುಲಾಬ | ಫೇರಾವ | ಘೋಟಾಳಿ |
| ಟಿಕಾಣಿ | ಝುಕ್ಕಾಸಿ | ಛಟಾಕ | ಚಡಾವ |
| ಠರಾವ | ಠಿಕಾಣಿ | ಚಪಾತಿ | ದಭಾಸಿ |
| ತಲಾಟಿ | ದಿವಾನಿ | ಪರಾಟ | ಪುಕಾರ |
| ದಿವಾಳಿ | ದುಕಾನ | ಬಚಾವ | ಬಡಾಯಿ |
| ದುನ್ಯಾದ | ನಿವಾಂತ | ಬಟಾಯಿ | ಬಿದಾಯಿ |
| ಪರಾತ | ಪುರಾಟ | | ರಪಾಟಿ |

| | | | |
|---|---|---|---|
| ಪುಡಾರಿ | ಪುಟಾಣಿ | ಲಗಾದ | ಲತಾಡಿ |
| ಬೀಡಾರ | ಬರಾಟಿ | ಸಂಡಾಸ | ಹರಾಮ |
| ಮಸಾರಿ | ಲತಾಡಿ | ಅಂಗೂರ | ಜರೂರಿ |
| ಲಿಗಾಡ | ವಟಾಳಿ | ಕಚೋರಿ | ಬರೋಸಾ |
| ವೈವಾಟ | ಸರಾಸಿ | ಬೋಗೋಣಿ | |
| ಹಕಾರಿ | ಹಜಾರ | | |
| ಹಪ್ಯಾಪಿ | ಹಮಾಲಿ | | |

೩.೧.೫.೩ **ನಾಲ್ಕಕ್ಷರ**

| (ಮರಾಠಿ) | (ಉರ್ದು) | (ಉರ್ದು) |
|---|---|---|
| ಜಾಗರಾಣಿ | ಅಜಿವಾನ | ಅನಾಮತ್ತ |
| ನಾಕಾಬಂದಿ | ಕಿತಾಪತಿ | ಕುರಬಾನಿ |
| ಬೋರಮಾಳ | ತಾಬೆದಾಗ | ಪಂಚನಾಮ |
| ತಿರಸಾಟ | ಬನಾವಟ | ಬರಾಬರ |
| ಭಾಂಡವಾಲ | ಬಾರದಾನಿ | ಭಾನಾಮತಿ |
| ಸಾವಕಾರ | ಲಿಖಾವಟಿ | ಹಜಾಮತ. |

೩.೧.೬ **ಪದಾಂತ್ಯ ದೀರ್ಘಸ್ವರದಿಂದ ಕೂಡಿರುವ ಪದಗಳು**

| (ಮರಾಠಿ) | (ಮರಾಠಿ) | (ಉರ್ದು) | (ಉರ್ದು) |
|---|---|---|---|
| ಉಥೋ | ಖಡ್ಯಾ | ಕಚ್ಚಾ | ಗಲ್ಲಾ |
| ಕಾಟಾ | ಖಿಲ್ಲಾ | ಗಾಂಜಾ | ಚುಕ್ತಾ |
| ಕೈಮಾ | ಖವಾ | ಛಾಪಾ | ಡಬ್ಬಾ |
| ಚಾಕಾ | ಜಾಗಾ ಝುಗಾ | ದಂದ್ಯಾ | ನಾಲಾ |
| ತಾಂಡಾ | ನಾಕಾ | ಬಿಡಾ | ಸಸ್ತಾ |
| ಫಾಜಾ | ಬಾವಾ | ಹಲ್ಕಾ | ಎಕಸಾ |
| ಬೊಂಗಾ | ಭಾಡ್ಯಾ | ಪಕಳಾ | ಬರೋಸಾ |
| ಸವ್ವಾ | ಹುಂಡಾ | ರೋಕಡಾ | ಶೇಕಡಾ |
| ಸಳ್ಳೆ | ಚಿವುಡಾ | ಸಿದಾಸಾದಾ | |

| | |
|---|---|
| ಚೌರಸ್ತಾ | ಭರೊಸಾ |
| ವಟಗಾ | ದುಧಪೆಡಾ |

೩.೧.೭ **ದ್ವಿತ್ವಾಕ್ಷರ ಹೊಂದಿರುವ ಪದಗಳು**

೩.೧.೭.೧ **ಪದಾದಿ ದಿತ್ವ**

| (ಮರಾಠಿ) | (ಉರ್ದು) |
|---|---|
| ನ್ಯಾರಿ | ಖ್ಯಾಲ |
| ಪ್ಯಾಂಟನಾಗಿ | |

೩.೧.೭.೨ **ಪದಮದ್ಯ**

| (ಮರಾಠಿ) | (ಉರ್ದು) |
|---|---|
| ಕಜ್ಜಾಳಿ | ಗುಮ್ಮಟ |
| ಜಪ್ಪುಸಿ | ಝುಕ್ಕಾಸಿ |
| ದುನ್ಯಾದ | ಜರ‍್ರನೆ |
| ಪುಕ್ಕಟ | ಗಪ್ಪನೆ |
| ಹಪ್ಯಾಪಿ | ಚಪ್ಪಲ |
| ಅಚ್ಚಾಉಚ್ಚಾ | ದಕ್ಕಾಮುಕ್ಕಿ |
| ಗಮ್ಮತ್ತ | |
| ಡಬ್ಬುಣ | |
| ಪತ್ತುಲ | |
| ಬಾದ್ದುರ | |
| ಹಲ್ಕಟ | |
| ಹನ್ನಹುನ್ನಾರ | |

೩.೧.೭.೩ **ಪದಾಂತ್ಯ**

| (ಮರಾಠಿ) | (ಮರಾಠಿ) | (ಉರ್ದು) | (ಉರ್ದು) |
|---|---|---|---|
| ಅಕ್ಲ | ಉಲ್ಪಾ | ಕಚ್ಚಾ | ಖಿಲ್ಲಾ |
| ಉಲ್ಪಿ | ಖಡ್ಯಾ | ಗಪ್ಪ | ಗಬ್ರು |
| ಕಮ್ಮು | ಕರ್ಚ | ಗಲ್ಲಾ | ಗಲ್ಲಿ |

| | | | |
|---|---|---|---|
| ಕಿಲ್ಯಾ ಖಿಲ್ಯಾ | ಕಿಸ್ಯಾ | ಚುಕ್ತಾ | ಜಲ್ದಿ |
| ಖಟ್ಟಿ | ಗಚ್ಚ | ಜಾಸ್ತಿ | ಭತ್ತ |
| ಟಿಮ್ಮ | ದೇಣ್ಯಾ | ಟಿಬ್ಬಿ | ಡಬ್ಬಾ |
| ಧೋತ್ರ | ಪಲ್ಲಿ | ದಂದ್ಯಾ | ಪಕ್ಕಾ |
| ಪತ್ತ | ಪನ್ನಾ | ಬಿಲ್ಲಾ | ಸಸ್ತಾ |
| ಬುಕ್ಕಾ | ಭಾಡ್ಯಾ | ಹಲ್ಕಾ | ಚಿಮಟ್ಗಿ |
| ಮುರುಮ್ಮ | ಗಮ್ಮತ | ಲಂಗಡ್ಯಾ | ಅನಾಮತ್ತ |
| ಸವ್ವಾ | ಪೈವಸ್ತಿ | ಕಟಮಸ್ತ | ಸಾಡೆಸತ್ತಿ |
| | | ಚೌರಸ್ತಾ | |

೩.೧.೮ **ಅನುನಾಸಿಕದಿಂದ ಕೂಡಿರುವ ಪದಗಳು**

೩.೧.೮.೧ **ಎರಡಕ್ಷರ**

೩.೧.೮.೧.೧ **ಪದಾದಿ**

(ಮ) ನ್ಯಾರಿ ನಳಾ ನಾಷ್ಟಾ

(ಉ) ನಾಲಾ ನಿಗಾ ನಿಕ್ಕಾ

೩.೧.೮.೧.೨ **ಪದಮದ್ಯ**

| (ಮರಾಠಿ) | (ಉರ್ದು) |
|---|---|
| ಖಂಯಿ | ಕುಂಚಿ |
| ಗಂಟ | ಗಂಜ |
| ಗುಂಗ | ಗಾಂಡು |
| ಗೌಂಡಿ | ಗಾಂಜಾ |
| ಚಿಂದಿ | ಡಾಂವ |
| ತಾಂಡಾ | ದಂದ್ಯಾ |
| ದಾಂವ | |
| ಪುಂಗಿ | |
| ಭಾಂಡ್ಯಾ | |
| ಭೊಂಗಾ | |

೩.೧.೮.೧.೩ ಪದಾಂತ್ಯ

| (ಮರಾಠಿ) | (ಉರ್ದು) |
|---|---|
| ಅಣೆ | ಗರ್ಮಿ |
| ಕಣ | ದಾಮ |
| ಕೈಮಾ | |
| ಖುನಾ | |
| ಟಿಮ್ಮ | |
| ದೇಣ್ಯ | |
| ಪಾಣಿ | |
| ಪನ್ನಾ | |
| ವೈನಿ | |

೩.೧.೮.೨ ಮೂರಕ್ಷರ

೩.೧.೮.೨.೧ ಪದಾದಿ

| | |
|---|---|
| ನಾಜುಕ | ನಾಪತಾ > ಲಾಪತಾ |
| ನಿಕಾಲ | |
| ನಿವಾಡ | |
| ನೊಂದಣಿ | |
| ಮಸಾರಿ | |
| ಮುರುಮ್ಮ | |
| ಮೋಜಣಿ | |

೩.೧.೮.೨.೨ ಪದಮದ್ಯ

| (ಮರಾಠಿ) | (ಮರಾಠಿ) | (ಉರ್ದು) | (ಉರ್ದು) |
|---|---|---|---|
| ಕಂಜುಸ | ಕಿಮ್ಮತ | ಅಂಗೂರ | ಅಂಜೂರ |
| ಗಮ್ಮತ | ಗೊಂಡಾಳಿ | ಅನಾಜ | ಕಮಾನ |
| ಗೊಂಗಡಿ | ಗೊಂದುಲ | ಕಮಾಯಿ | ಖುನಸಿ |
| ಚಿಮುಟ್ಗಿ | ಚುಂಗಡಿ | ಗುಮ್ಮಟ | ತುರಂತ |

| | | | |
|---|---|---|---|
| ಛಿನಾಲಿ | ಜಂಜಡ | ಪಂಚಾತಿ | ಲಂಗಡ್ಯಾ |
| ಜುಮಕಿ | ದೇಣಗಿ | ಸಂಡಾಸ | |
| ಧಮಕಿ | ದಾಂದಲಿ | | |
| ದಾವತಿ | ಪಂಟಿಂಗ | | |
| ಬಾಂಡೊಲ | | | |

೩.೧.೮.೨.೩ ಪದಾಂತ್ಯ

| (ಮರಾಠಿ) | (ಉರ್ದು) | (ಮರಾಠಿ) | (ಉರ್ದು) |
|---|---|---|---|
| ಕಿರಾಣಿ | ಆಸಾಮಿ | ಗಿರಣಿ | ಆರಾಮ |
| ಠಿಕಾಣಿ | ಕಮಾನ | ತತ್ರಾಣಿ | ಧಾರಣಿ |
| ತುಫಾನ | ಬೋಗೋಣಿ | ಧಾಮಣಿ | |
| ದುಕಾನ | ಮೋಜಣಿ | ಪಾವಣ್ಯ | |
| ಪುಟಾಣಿ | ಹರಾಮ | ಬುಕಣಿ | |
| ಬೇಸಾನ | | | |
| ಮುರುಮ್ಮ | | | |
| ಸಾಗೋನಿ | | | |

೩.೧.೮.೩ ನಾಲ್ಕಕ್ಷರ

೩.೧.೮.೩.೧

| ಆದಿ | ಪರಮದ್ಯ | ಪದಾಂತ್ಯ |
|---|---|---|
| ನಾಕಾಬಂದಿ(ಉ) | ಅನಾಮತ (ಉ) | ಅಜವಾನ (ಉ) |
| ನಿಗರಾಣಿ(ಮ) | ಅಮರಾಯಿ (ಉ) | ಕುರಬಾನಿ (ಉ) |
| | ಇನಾಮಂತ್ತಿ (ಮ) | ಗೌಂವಚಾಣ (ಮ) |
| | ಖಾನಾವಳಿ (ಮ) | ಬಾಗವಾನ (ಉ) |
| | ಗಂಟಿಚೌಡಿ (ಮ) | ಬಾರದಾನಿ (ಉ) |
| | ಗೌಂವಚಾಣ (ಮ) | |
| | ದಂಗಾಮುಕ್ತಿ (ಮ) | |
| | ದೇಶಮುಖ (ಮ) | |
| | ದಾಮ್‌ಧೂಮ್ (ಉ) | |

ಪಂಚನಾಮಿ (ಇ)

ಪ್ಯಾಂಟಟುನಾಗಿ (ಮ)

ಪಾವಬಂದ (ಉ)

ಪಾಂಚವರಿ (ಮ)

ಬಾನಾಮತಿ (ಉ)

ರಾಂಡಬಾಜ (ಉ)

ಸಮಜಾಸಿ (ಉ)

ಹಜಾಮತ (ಮ)

ಕನ್ನಡದಲ್ಲಿರುವಂತೆ ಮ , ನ ಧ್ವನಿಮಾಗಳೂ ಎಲ್ಲಾ ಹಂತದಲ್ಲು ಬಳಕೆಯಲ್ಲಿದೆ. ಇ ಪದಮಧ್ಯ ಮತ್ತು ಪದಾಂತ್ಯ ಪರಿಸರದಲ್ಲಿ ಬಳಕೆಯಲ್ಲಿದೆ. ಜ್ , ಇ್ ಇವುಗಳು ಉಪಧ್ವನಿಗಳಾಗಿ ಬಳಕೆಯಲ್ಲಿವೆ. ಇವುಗಳನ್ನು ø ಯು ಸಂಕೇತಿಸುತ್ತಿದೆ. ಇವುಗಳಲ್ಲದೆ ನ ಈ ಧ್ವನಿಮಾವು ಬಳಕೆಯಲ್ಲಿದೆ. ಆದರೂ ಇದನ್ನು ನ ವೇ ಪ್ರತಿನಿಧಿಸುತ್ತದೆ. ಇದರ ಬಳಕೆ ಪದಮಧ್ಯ ಮತ್ತು ಕೆಲವೊಮ್ಮೆ ಪದಾದಿ ಪರಿಸರದಲ್ಲಿ ಬಳಕೆಯಲ್ಲಿವೆ.

**೩.೧.೯ ಸ್ವೀಕೃತ ಪದಗಳು ಧ್ವನಿಮಾತ್ಮಕ ಬದಲಾವಣೆಗಳು**

ಎಲ್ಲಾ ಸ್ವೀಕೃತ ಪದಗಳಂತೆ ಮರಾಠಿ, ಉರ್ದು ಭಾಷೆಯಿಂದ ಕನ್ನಡಕ್ಕೆ ಬಂದ ಪದಗಳು ಧ್ವನಿಮಾತ್ಮಕವಾಗಿ ಬದಲಾಗಿವೆ. ಗುಲಬರ್ಗಾ ಕನ್ನಡವು ಉಳಿದ ಕನ್ನಡಗಳಲ್ಲಿ ನಡೆದ ಎಲ್ಲಾ ಬದಲಾವಣೆಗಳನ್ನು ಮಾಡಿಕೊಂಡಿದೆ ಎನ್ನಬಹುದು. ಆ ಬದಲಾವಣೆ ಹೀಗೆ ನೋಡಬಹುದು.

**೩.೧.೯.೧ ಪದಾಂತ್ಯ ದೀರ್ಘಸ್ವರ ಹ್ರಸ್ವವಾಗಿರುವುದು**

ಅಡಮುಟಾ > ಅಡಮುಟ (ಮ)

ಅದಲಾಬದಲಾ > ಅದಲಿಬದಲಿ > ಖದಲಿಬದಲಿ (ಉ)

ಎಕಟಾ > ಎಕಟ > ಯೆಕಟ (ಮ)

ಖರಚಿ > ಖಡಚಿ > ಕಡಚಿ (ಉ)

ಕಮಾಈ > ಕಮಾಯಿ (ಉ)

ಕಲೆಜಾ > ಕಾಳಜ (ಉ)

ಕಾಯದಾ > ಕಾಯ್ದೆ (ಉ)

ಕಿರಾಣಾ > ಕಿರಾಣಿ (ಮ)

ಕಿರಾಯಾ > ಕಿರಾಯಿ (ಉ)

ಕುರುವಡಾ > ಕುರುಡ್ಗಿ (ಮ)

ಖರಾಯಿ > ಖರೆ (ಮ)

ಖಾತಾ > ಖಾತೆ (ಉ)

ಗಚಕಾ > ಗಚಗಿ (ಮ)

ಗಲೀ > ಗಲ್ಲಿ (ಉ)

ಗಾಂಡಾ > ಗಾಂಡು (ಉ)

ಗಾಡಾ > ಗಾಡಿ (ಮ)

ಗದ್ದಿ > ಗಾದಿ (ಉ)

ಗಿರಣೀ > ಗಿರಣಿ (ಮ)

ಗಿರಾಕಾ > ಗಿರಾಕಿ (ಉ)

ಗೋಟಾಲಾ > ಗೋಟಾಳಿ

ಚಿಮಟಾ > ಚಿಮುಟ್ಗಿ (ಮ)

ಚುರಮುರಾ > ಚುರಮುರಿ (ಉ)

ಝುಮಕಾ > ಝುಮಕಿ (ಉ)

ತುಕಡಾ > ತುಕಡಿ (ಉ)

ದಿವಾನಾ > ದಿವಾನಿ (ಉ)

ದಿವಾಳೋ > ದಿವಾಳಿ (ಮ)

ನಾಪತಾ > ನಾಪತ್ತೆ > ಲಾಪತಾ (ಉ)

ಪಾವುಣಾ > ಪಾವುಣ್ಯ (ಮ)

ಬರಾಟಾ > ಬರಾಟಿ (ಮ)

ಭಮಟ್ಯಾ > ಭಮಟಿ (ಮ)

ಬೋಪಣೀ > ಬೋಣಿ > ಬೋಣಗಿ (ಮ)

೩.೧೯.೨ **ಪದಾಂತ್ಯ ದೀರ್ಘಸ್ವರ ದ್ವಿತ್ವ ರೂಪಗಳು**

ಉಲಟಾ > ಉಲ್ಟಾ (ಉ)

ಕಾಯದಾ > ಕಾಯ್ದೆ (ಉ)

ಕುರುವಡಾ > ಕುರುಡ್ಗಿ (ಮ)

ಗಲೀ > ಗಲ್ಲಿ (ಉ)

ಚಿಮುಟಾ > ಚಿಮುಟ್ಗಿ (ಮ)

ಪಾವುಣಾ > ಪಾವ್ಯಣ್ಯ > ಪೌಣ್ಯ (ಮ)

ಉಲಟಾ > ಪಲ್ಟಿ (ಉ)

೩.೧೯.೩ **ಪದಾಂತ್ಯ ಹ್ರಸ್ವ ದಿತ್ವವಾಗುವ ರೂಪಗಳು**

ಉಧಾರ > ಉದ್ರಿ (ಮ)

ಕಿಸೆ > ಕಿಶ್ಯಾ (ಉ)

ಪುಕ್ಕಟ > ಪುಗಸಟ್ಟೆ (ಮ)

ಟಿಂಬ > ಟಿಮ್ಮ (ಉ)

'ಆ', 'ಈ' ಪದಾಂತ್ಯದಲ್ಲಿ ಬಂದಿದ್ದರೆ, ಆ ಪದವು ದಿತ್ವಗೊಂಡಿದ್ದು ಕಂಡುಬರುತ್ತದೆ. ಇದು ಎಲ್ಲಾ 'ಆ', 'ಈ' ಕಾತ್ಯಂತ್ವ ಪದಗಳಲ್ಲಿ ನಡೆದಿಲ್ಲ. ಹ್ರಸ್ವದಲ್ಲಿಯೂ ಕೂಡಾ ಒಂದೂ ನಿಮಯಮಾಡಿ ಅವು ಯಾಕೆ, ದಿತ್ವ ಹೊಂದುತ್ತಿವೆ ಎಂದೂ ಹೇಳುವುದು ಕಷ್ಟ. ಇವುಗಳ ಬಗ್ಗೆ ನಿರ್ಧಿಷ್ಟವಾಗಿ ಹೇಳಲು ಹೆಚ್ಚಿನ ಮಾಹಿತಿಯ ಅಗತ್ಯತೆ ಇದೆ. ಅಂತಹ ಬದಲಾವಣೆ ಹೊಂದಿರುವ ಇನ್ನುಷ್ಟು ಪದಗಳು ಸಿಕ್ಕರೆ, ಆಗ ಬದಲಾವಣೆಗೆ ಕಾರಣ ಗುರುತಿಸುವುದು ಸಾಧ್ಯವಾಗಬಹುದು. ಇವಕ್ಕೆ ವಿರುದ್ಧವಾಗಿ ದೀರ್ಘ ಸ್ವರಾಂತ್ಯ ಮತ್ತು ಹ್ರಸ್ವ ಸ್ವರಾಂತದ ಕೆಲವು ಪದಗಳಲ್ಲಿಯ ದಿತ್ವವು ಬಿದ್ದು ಹೋಗಿದೆ.

ಗದ್ದೀ > ಗಾದಿ (ಉ)

ಭಮಚ್ಯಾ > ಭಮಚಿ (ಮ)

ಚೌಪಟ್ಟಿ > ಜೊಪಡಿ (ಉ)

೩.೧೯.೪ **'ಯ' ಕಾರ ಆಗಮವಾಗುವುದು**

(ಪದಮದ್ಯ) ಪಹಲಾ > ಪಯಲೆ (ಉ)

ಆಹೇರಿ > ಆಯಾರಿ (ಮ)

(ಪದಾಂತ್ಯ) ಕಿಸೆ > ಕಿಶ > ಕಿಸ್ಯ (ಉ)

ಖಾತಾ > ಖಾತ್ಯ (ಉ)

ಪಾವುಣಾ > ಪಾವುಣ್ಯ (ಮ)

'ಯ' ಕಾರವು ಪದಾತ್ಯದಲ್ಲಿ ಆಗಮವಾಗಿದ್ದರೆ ದಿತ್ವವಾಗಿ ಮತ್ತು ಪದಮದ್ಯದಲ್ಲಿದ್ದರೆ ಮಧ್ಯದ ಅಕ್ಷರ ಲೋಪಗೊಂಡು ಬಳಕೆಯಲ್ಲಿದೆ.

೩.೧೯.೫ ಅ > ಇ

ಚೈನ > ಚೈನಿ (ಉ)

ತಿರಸಾಟ > ತಿರಸಾಟಿ (ಮ)

ತೇಜ > ತೆಜಿ (ಉ)

ಮಸಾರ > ಮಸಾರಿ (ಮ)

ತಪರಾಕ > ತಪರಾಕಿ (ಮ)

ಕಲಂಗಡ > ಕಲಂಗಡಿ (ಮ)

ಘಾಬರ > ಗಾಬರಿ (ಉ)

ಖುನ್ನಸ > ಖುನಸಿ (ಮ)

ಖಾಣಾವಳ > ಖಾನಾವಳಿ (ಮ)

೩.೧೯.೬ ಆ > ಇ

ಕಿರಾಣಾ > ಕಿರಾಣಿ (ಮ)

ಕಿರಾಯಾ > ಕಿರಾಯಿ (ಮ)

ಕುರುವಡಾ > ಕುರುಡ್ಗಿ (ಮ)

ಗಾಡಾ > ಗಾಡಿ (ಮ)

ಗಿರಾಕಾ > ಗಿರಾಕಿ (ಉ)

ಝುಮಕಾ > ಝುಮಕಿ > ಝುಮ್ಕಿ > ಜುಮ್ಕಿ (ಉ)

ತುಕಡಾ > ತುಕುಡಿ > ತುಕ್ಡಿ (ಮ)

ದಿವಾನಾ > ದಿವಾನಿ (ಮ)

ಪುಟಾಣಾ > ಪುಟಾಣಿ (ಮ)

ಭರಾಟಾ > ಭರಾಟಿ (ಮ)

ಭಮಟ್ಟಾ > ಭಮಟಿ (ಮ)

ಗೋಟಾಲಾ > ಗೋಟ್ಟಾಳಿ (ಮ)

೩.೧೯.೭ ಅ > ಆ, ಆ > ಎ

ಖಾವ > ಖವಾ (ಮ)

ಖುಣ > ಖುನಾ (ಮ)

ಕಾಯದಾ > ಕಾಯದೆ > ಕಾಯ್ದೆ (ಉ)

ಪಹಲಾ > ಹಯಲೆ > ಪೈಲೆ (ಉ)

ಸ್ವರಗಳಲ್ಲಿ ಇಂತಹ ಬದಲಾವಣೆಯನ್ನು ಕಾಣಬಹುದು. ಕನ್ನಡವು ವ್ಯಂಜನ ಪದಗಳಲ್ಲಿ ಮಾಡಿಕೊಂಡಿರುವ ಧ್ವನಿ ಪರಿವರ್ತನೆಗಳು ಗುಲಬರ್ಗಾ ಕನ್ನಡದ ಮರಾಠಿ, ಉರ್ದುವಿನಿಂದ ಸ್ವೀಕರಿಸಿದ ಪದಗಳಲ್ಲು ನಡೆದಿದೆ. ಅವನ್ನು ಹೀಗೆ ಗುರುತಿಸಬಹುದು.

೩.೧೯.೮ ಕ > ಗ

ಅಟಕಾವ > ಅಟಗಾವ (ಮ)

ಧಸಕಿ > ದಸಗಿ > ದಸ್ಗಿ (ಮ)

ಮುಕ್ಕಟ > ಮುಗಸಟ್ಟೆ, ಮುಸಗಟ್ಟೆ (ಉ)

ಗಚಕಾ > ಗಚಗಿ > ಗಚ್ಗಿ (ಉ)

ಪದಾಂತ್ಯ ಮತ್ತು ಪದಮಧ್ಯ ಎರಡು ಪರಿಸರದಲ್ಲು ಕ > ಗ ಆಗಿರುವುದಕ್ಕೆ ಉದಾಹರಣೆಗಳು ಸಿಗುತ್ತವೆ.

೩.೧೯.೯ ಲ > ಳ

ಕಲೆಜಾ > ಕಾಳಜ (ಉ)

ಜಂಬಪಲ > ಜಾಪಾಳ (ಮ)

ಬಾಂಡವಾಲ > ಬಂಡವಾಳ (ಮ)

ಗೊಟ್ಟಾಲಾ > ಗೊಟ್ಟಾಳಿ > ಖೋಟ್ಟಾಳಿ (ಮ)

೩.೧೯.೧೦ ಚ > ಜ, ಚ > ಸ

ಚೌಪಟ್ಟಿ > ಜೋಪಡಿ > ಜೋಪ್ಡಿ (ಉ)

ಛುಟ್ಟಿ > ಚುಟ್ಟಿ > ಸೂಚಿ (ಉ)

೩.೧.೯.೧೧ ನ > ಲ

ಕನ್ನಡದಲ್ಲಿ ನಿಂಬಿಕಾಯಿ > ಲಿಂಬಿಕಾಯಿ, ನೋಟು > ಲೋಟು ಇಂಥಹ ಸ್ವಚ್ಛಂದ ಪರಿಸದಲ್ಲಿರುವ ಪದಗಳು ಅನೇಕ ಇವೆ. ಅಂತೆಯೇ ಸ್ವೀಕರಣ ಪದಗಳನ್ನು ಇಂಥದ್ದೆ ಸ್ವಚಂದ ಬದಲಾವಣೆ ಕಾಣಬುಹುದು.

ನಾಪತಾ > ನಾಪತ್ತೆ > ಲಾಪತಾ (ಉ)

ಇದರ ಬಗ್ಗೆ ಇನ್ನಷ್ಟು ಸೂಕ್ಷ್ಮ ಆಧ್ಯಯನದ ಅಗತ್ಯವಿದೆ. ಹೆಚ್ಚು ಉದಾಹರಣೆಗಳು ಸಿಕ್ಕಿರೆ. ಈ ಪ್ರಕ್ರಿಯೆಯ ಸ್ವರೂಪ ಚೆನ್ನಾಗಿ ತಿಳಿದುಕೊಳ್ಳಬಹುದು.

೩.೧.೯.೧೨ ಹ > ø

ನಿಗಾಹ > ನಿಗಾ (ಉ)

ಜಗಹ > ಜಾಗಾ (ಮ)

ಪಾಹಾಣಿ > ಪಾಣಿ (ಮ)

ಜಾಹಾಗಿರದಾರ > ಜಾಗಿರದಾರ (ಉ)

ಜಾಹಾಬಾದ > ಜಾಬಾದ (ಉ)

ಕನ್ನಡದಲ್ಲಿ ಗುಲಬರ್ಗಾ ಕನ್ನಡ ಬಿಟ್ಟು ಉಳಿದ ಕನ್ನಡದ ಪ್ರಭೇದಗಳಲ್ಲಿ ಹ > ø' ಈ ಪ್ರಕ್ರಿಯೆ ನಡೆಯುತ್ತಿದೆ. ಮೇಲಿನ ಪದಗಳನ್ನು ನೋಡಿದಾಗ ಕನ್ನಡದಲ್ಲಿ 'ಹ'ಕಾರ ಲೋಪವಾಗುತ್ತಿರುವುದಕ್ಕೂ ಈ ಸ್ವೀಕರಣ ಪದಗಳಲ್ಲಿನ 'ಹ 'ಕಾರ ಲೋಪವಾಗುವುದಕ್ಕೂ ಸಾಮ್ಯತೆ ಇಲ್ಲ ಎನ್ನಿಸುತ್ತದೆ. ಇಲ್ಲಿರುವ 'ಹ'ಕಾರ ಲೋಪವು ಕನ್ನಡದಂತೆ ಸೌಲಭ್ಯ ಕಾಂಕ್ಷಿಯಾಗಿದೆ. ಇನ್ನೂ ಕೆಲವು ಪದಗಳಲ್ಲಿ ಹ > ø ಲೋಪಗೊಂಡು ಯ ಆಗಮವಾಗುತ್ತಿದೆ. ಇದಕ್ಕೆ ಕನ್ನಡದಂತೆ ಬದಲಾವಣೆಯ ಚಾರಿತ್ರಿಕತೆ ಇರಲಿಕ್ಕಿಲ್ಲ. ಒಂದು ವೇಳೆ ಕನ್ನಡದಂತ ಚಾರಿತ್ರಿಕ ಹಿನ್ನೆಲೆ ಈ ಪದಗಳಿಗೂ ಇದ್ದರೂ ಇಲ್ಲಿ ಅವು ಲೋಪವಾಗುತ್ತಿರುವುದು ಪದಮಧ್ಯ ಅವು ಪ > ಹ > ø ಈ ಪ್ರಕ್ರಿಯೆ ಅಲ್ಲ ಹ > ø ಈ ಪ್ರಕ್ರಿಯೇಗೊಳಗಾಗುತ್ತಿರುವುದು ಸ್ಪಷ್ಟವಿದೆ. ಹೀಗಾಗಿ ಈ ಪರಿವರ್ತನೆ (ಹ > ø) ಕನ್ನಡ ಹಕಾರ ಲೋಪದೊಂದಿಗೆ ಹೊಲವು ಸಾಧ್ಯತೆ ಇಲ್ಲವಾಗುತ್ತದೆ. ಆಹೆರಿ > ಆಯಾರಿ, ಪಹಲೆ >ಹಯಲೆ ಈ ಪದಗಳಲ್ಲಿ 'ಹ'ಕಾರದ ಉಚ್ಚರಣೆಯ ಬದಲಾಗಿ ಯ ಕಾರ ಬಂದಿದೆ. ವ ಕಾರ ಲೋಪಗಳ್ಳುವ (ವ>ø) ಇನ್ನೊಂದು ಬದಲಾವಣೆ ಸ್ವೀಕರಣ ಪದಗಳಲ್ಲಿ ನಡೆದಿದೆ. 'ವ'ಕಾರ ವಿರುವ ಕೆಲವು ಪದಗಳಲ್ಲಿ ಅದು ಬಿದ್ದು ಹೋಗಿದೆ.

ಕುರುವಡಾ > ಕುರುಡ್ಗಿ (ಮ)

ಬಾಂಡವಾಲ > ಬಾಂಡೊಲ (ಉ)

ಘಡವಂಚಿ > ಘಡಂಚಿ (ಮ)

ಪಾವುಣ್ಯಾ > ಪಾವುಣ್ಯ > ಪೌಣ್ಯ (ಮ)

ಮೇಲೆ ಹೇಳಿದ ಬದಲಾವಣೇಗಳಲ್ಲದೆ ಇನ್ನೂ ಅನೇಕ ಬದಲಾವಣೆಗಳು ನಡೆದಿವೆ. ಣ>ನ (ಖುಣ > ಖುನಾ) ಅಥವಾ ರ > ಡ (ಖರಚೆ > ಕಡಚಿ ) ಇಂತಹ ಅನೇಕ ಸಮಸ್ಯೆಗಳು ನಮ್ಮ ಮುಂದಿವೆ. ಅವುಗಳಿಗೆ ಪರಿಹಾರ ಹುಡುಕಾಟ ಅಗತ್ಯವಿದೆ.

ಗುಲಬರ್ಗಾ ಕನ್ನಡವು ಮರಾಠಿ, ಉರ್ದು ಭಾಷೆಗಳಿಂದ ಸ್ವೀಕರಿಸಿಕೊಂಡಿರುವ ಪದಗಳಲ್ಲಾದ ಬದಲಾವಣೆಗಳನ್ನು ಗುರುತಿಸುವಲ್ಲಿ ಇಲ್ಲಿ ಒಂದು ಸಣ್ಣ ಪ್ರಯತ್ನ ಅಷ್ಟೇ. ಇದರ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನಗಳ ಅಗತ್ಯವಿದೆ. ಇಲ್ಲಿ ಕೇವಲ ಬದಲಾಗುತ್ತಿರುವ ಬದಲಾವಣೆಯ ಬಗ್ಗೆ ಗುರುತಿಸಲಾಗಿದೆ. ಅದಕ್ಕೆ ಕಾರಣ ಗುರುತಿಸಲು ಅಧ್ಯಯನಗಳು ನಡೆಯಬೇಕಾಗಿದೆ. ಸ್ವೀಕರಣದಿಂದ ಗುಲಬರ್ಗಾ ಕನ್ನಡದ ಮೇಲೆ ಆಗುತ್ತಿರುವ ಬದಲಾವಣೆ ಹುಟ್ಟುತ್ತಿರುವ ಹೊಸ ರಚನೆ ಇವುಗಳೆಲ್ಲವು ಅಧ್ಯಯನ ಬಯಸುವವೇ ಆಗಿವೆ. ಹೆಚ್ಚಿನ ಅಧ್ಯಯನಗಳು ಬಂದರೆ ಅದರ ಸ್ವರೂಪ ಗಟ್ಟಿಯಾಗಿ ಅರಿತುಕೊಳ್ಳಬಹುದು.

**೩.೨. ಆಕೃತಿಮಾ ಹಂತ**

**೩.೨.೧ ನಾಮ ಪ್ರಕೃತಿಗಳು**

ನಾಮ ಪ್ರಕೃತಿಗಳನ್ನು ನಾಮಪದದ ಮೂಲ ಸಂಪತೆನ್ನಬಹುದು. ನಾಮಪ್ರಕೃತಿಗಳು ವಿಭಜಿಸಲು ಸಾಧ್ಯವಿಲ್ಲದ ರೂಪಗಳು. ಗುಲಬರ್ಗಾ ಕನ್ನಡದಲ್ಲಿ ಮೂಲ ಕನ್ನಡ ನಾಮ ಪ್ರಕೃತಿಗಳೊಂದಿಗೆ ಸ್ವೀಕೃತ ನಾಮ ಪ್ರಕೃತಿಗಳೂ ಬಳಕೆಯಲ್ಲಿವೆ. ಅವುಗಳನ್ನು ಹೀಗೆ ವಿಭಾಗಿಸಬಹುದು.

**೩.೨.೧.೧ ರೂಢ ನಾಮಗಳು**

ರೂಢಿಯಿಂದ ಬಂದ ಹೆಸರಿಸುವ ಪದಗಳು ನಾಮ ವಾಚಕಗಳಾಗುತ್ತವೆ.

| (ಮರಾಠಿ) | (ಉರ್ದು) |
|---|---|
| ಉದ್ರಿ, ಖುನಾ, ಗುಂಗ, ಧಗಿ, | ಖುಲ್ಲಾ, ಖ್ಯಾಲ, ಚುಕ್ತಾ, ಸಸ್ತಾ, |
| ಧ್ಯಾಸ, ಧಾಪ, ಅಟಾಪ, ಕಿಮ್ಮತ, | ಅನಾಜ, ಅವಾಜ, ಇರಾದೆ, ಖುನಸಿ, |
| ಪುರಾಟ, ತಾಕಿತ, ನಿವಾಡ, | ಖಾತರಿ, ಚಮಕ, ಪರಾತ, ಗರಮ, |
| ದಾಂದಲಿ, ಡುಬರಿ, ಬರಾಟಿ, | ಪಗಾರ, ಪಾವತಿ, ಪುಕಾರ, ಬಚಾವ, |
| ವೈವಾಟ, ಹರಾಸ, ಉಸಾಬರಿ, | ಲಗಾವ, ಲತಾಡಿ, ಪುಸಲತ.... |
| ಹಕನಾಕ..., | |

೩.೨.೧.೨ **ಅಂಕಿತನಾಮ**

ಒಂದೇ ಜಾತಿಯ (ವರ್ಗದ) ಹಲವು ವಸ್ತುಗಳಲ್ಲಿ, ಪ್ರಾಣಿಗಳಲ್ಲಿ, ವ್ಯಕ್ತಿಗಳಲ್ಲಿ ಒಂದನ್ನೆ ಬೇರೆ ಮಾಡಿ ತೋರಿಸಲು ಇಟ್ಟ ಹೆಸರುಗಳು ಅಂಕಿತನಾಮ ಎನಿಸಿಕೊಳ್ಳುತ್ತವೆ.

| **(ಮರಾಠಿ)** | **(ಉರ್ದು)** |
|---|---|
| ಕಾಟಾ, ಕಿಲ್ಯಾ, ಖಡು, ಖಾವಾ, | ಕುಂಚಿ, ಖಾತೆ, ಖೋಲ್ಲಿ, ಗಂಜ, |
| ಗಂಟ, ಗಾಡಿ, ಪೊರಿ, ಪಾರ, | ಗಾದಿ, ಡಬ್ಬಾ, ಮೋರಿ, ಥೈಲಿ, ಲಡಿ, |
| ಚೌಕ, ಝುಗಾ, ಝಾರಿ, ಪನ್ನಾ, | ಕಡಚಿ, ಕಬಾಬ, ಗುಜ್ಜರಿ, ಗಟಾರ, |
| ವೈನಿ, ಕಚೋರಿ, ಗಡಂಚಿ, ಕುರುಡ್ಗಿ, | ಚಿಮುಟ್ಗಿ ತಾಯಿತ, ಅಂಗೂರ, |
| ಖಜ್ಜುರಿ, ಕಿರಾಣಿ, ದುಕಾನ, | ಅಂಜೂರ, ಚಪರಾಸಿ ಇಮಾರತ.... |

೩.೨.೧.೩ **ಅನ್ವರ್ಥನಾಮ**

ಅರ್ಥಕ್ಕೆ ಅನುಗುಣವಾಗಿ ಉದ್ಯೋಗ ಗುಣ, ಮೊದಲಾದವುಗಳಿಂದ ವಸ್ತುವಿಗೆ, ಇಲ್ಲವೆ ವ್ಯಕ್ತಿಗೆ ಬಂದ ಹೆಸರುಗಳು ಅನ್ವರ್ಥಕನಾಮಗಳೆನ್ನುತ್ತಾರೆ.

| **(ಮರಾಠಿ)** | **(ಉರ್ದು)** |
|---|---|
| ಐಬ, ಕರ್ಚ, ಖಡಿ, ಬರೆ, | ಗಪ್ಪ, ಗರು, ಗಾಂಡು, ಗುಂಗ, ಚೆಲಾ, |
| ಖೋಡಿ, ಚಾಳಿ, ತೇಜಿ, ಥಾಟ, | ಠಿಕ, ಡೊಂಗಿ, ಥೊಡೆ, ಭಾತಿ, |
| ಧಾಡಿ, ಹೈಗ್ಯೆ, ಹೊಂಬ, ಆಖರಿ, | ಕಟಾಯಿ, ನಿಕ್ಕಾ, ಕಮಾಲ, ಕಿರಾಯಿ, |
| ಕಂಜುಸ, ದಿವಾಳಿ, ನಾಜುಕ, | ಖಿಲಾಡಿ, ಘೋಟಾಳಿ, ಚಡಾವ, |
| ಫಟಿಂಗ, ಹಮಾಲಿ, | ತುರಂತ, ಬಟಾಯಿ, ರಪಾಟೆ, |
| ಹರಾಮ, ಕಿತಾಪತಿ, ಠಿಕಠಾಕ, | ಲಂಗಡ್ಯಾ.... |
| ಅಡಮುಟ | |

ಈ ಪ್ರಕಾರದ ಸ್ವೀಕರಣ ನಾಮ ಪ್ರಕೃತಿಗಳನ್ನು ಗುಲಬರ್ಗಾ ಕನ್ನಡದಲ್ಲಿ ಕಾಣಬಹುದು. ಇಲ್ಲಿ ಪ್ರಾತಿನಿಧಿಕವಾಗಿ ಕೆಲವನ್ನು ವಿವರಿಸಲಾಗಿದೆ. ಇವುಗಳಲ್ಲದೆ, ಕೆಲವು ಸಾಧಿತ ನಾಮ ಪ್ರಕೃತಿಗಳು ಕೂಡಾ ಇರುವುದನ್ನು ಕಾಣಬಹುದು.

೩.೨.೧.೪ **ಸಾಧಿತ ನಾಮಗಳು**

| **ರೂಢನಾಮ** | **ಅಂಕಿತ** | **ಅನ್ವರ್ಥ** |
|---|---|---|
| **(ಮರಾಠಿ)** | **(ಮರಾಠಿ)** | **(ಮರಾಠಿ)** |
| ಖಂಡುಗ | ಚಾರಸ್ತಾ | ಬೇವರ್ಸಿ |

| | | |
|---|---|---|
| ಪೈವಸ್ತಿ | ಖಾನಾವಳಿ | ಅಡಮುಟ |
| ಬಾಂಡೊಲ | ದೂರಮುಂಜಿ | ಇನಾಮಂತಿ |
| ಕಾರಬಾರಿ | ಪಾನಪಟ್ಟಿ | ಐಸಾರಾಮ |
| ದೇಶಾವರ, | (ಉರ್ದು) | ಖಾಡಾಖಡಿ |
| ಗೌಂವಟಾಣ | ನಾಕಾಬಂದಿ | ಗಂಡಿಚೌಡಿ |
| (ಉರ್ದು) | ಬಾಗವಾನ | ಪಾವಬಂದ |
| ಗೊರಗರಿಬ | | (ಉರ್ದು) |
| ನಾಪತ್ತೆ | | ಕಟಮಸ್ತ |
| ಲಿಖಾವ | | ಕಾಟಗಾಯಿ |
| ಉಟಬೈಟಾಕ | | ಚಕಮಕಿ |
| | | ಧಕ್ಕಾಮುಕ್ಕಿ |
| | | ಸಾಡೆಸತ್ತಿ |

ಗುಲಬರ್ಗಾ ಕನ್ನಡ ನುಡಿಯು ಇವುಗಳನ್ನು ಅನ್ಯ ಭಾಷೆಯಿಂದ ಸ್ವೀಕರಿಸಿಕೊಂಡಿರುವ ನಾಮ ಪ್ರಕೃತಿಗಳೆಂದು ಗುರುತಿಸಬಹುದು. ಇವುಗಳಲ್ಲದೆ. ಪಾರಸಿ, ಹಿಂದಿ, ಇಂಗ್ಲಿಷ್, ತೆಲುಗು ಭಾಷೆಗಳಿಂದ ಸ್ವೀಕರಿಸಿಕೊಂಡಿರುವ ನಾಮ ಪ್ರಕೃತಿಗಳು ಗುಲಬರ್ಗಾ ಕನ್ನಡದಲ್ಲಿದೆ.

ಒಂದು ಭಾಷೆಯಲ್ಲಿ ಎಷ್ಟೇ ಮೂಲ ನಾಮ ಪ್ರಕೃತಿಗಳಿರಲಿ ಅವುಗಳಿಂದ ಅನೇಕ ಹೊಸ ಪದಗಳನ್ನು ಹುಟ್ಟಿ ಹಾಕುವುದು ಪ್ರತಿ ಭಾಷೆಯ ಮೂಲ ಗುಣ ಎನ್ನಬಹುದು. ಹಾಗೆ ರಚಿಸಿ ಕೊಳ್ಳುವಾಗ ಆ ಭಾಷೆಯ ಎರಡು ಪದಗಳನ್ನು ಕೂಡಿಸಿ ಪದಗಳನ್ನು ಅಥವಾ ಪದಗಳಿಗೆ ಪ್ರತ್ಯಯಗಳನ್ನು ಸೇರಿಸುವುದರೊಂದಿಗೆ ಪದಗಳನ್ನು ರಚಿಸಿಕೊಳ್ಳುತ್ತದೆ. ಈ ಪ್ರಕ್ರಿಯೆಯು ಗುಲಬರ್ಗಾ ಕನ್ನಡ ಸ್ವೀಕರಣ ಪದಗಳಲ್ಲಿ ಹೀಗೆ ಗುರುತಿಸಬಹುದು.

**೩.೨.೨. ರಚನೆ ಹೊದಿರುವ ನಾಮಪದಗಳು**

**೩.೨.೨.೧ ಮೂಲ+ಮೂಲ**

**೩.೨.೨.೧.೧ ಮರಾಠಿ**

ಅಚ್ಚಾ+ಉಚ್ಚಾ > ಅಚ್ಚಾಉಚ್ಚಾ

ಅಬುಳ+ಚಬುಳ > ಅಬಳಾಚಬಳಾ

ಇನಾಮ+ವಂತಿ > ಇನಾಮಂತಿ

ಐಸ್+ಆರಾಮ > ಐಸಾರಾಮ

ಗಾಂಟ+ಚೋರ > ಗಂಟಿಚೌಡಿ

ಗೋರ+ಗರಿಬ > ಗೋರಗರಿಬ

ಚಾಹಾ+ಪಾನಿ > ಚಾಪಾನಿ

ಗಾಂವ+ಠಾಣ > ಗೌಂವಟಾಣ

ಚಾರ+ರಸ್ತಾ > ಚೌರಸ್ತಾ

ಜಾಗ+ಹರಣ > ಜಾಗರಾಣಿ

ತಾಡ+ಪತ್ರಾಸ > ತಾಡಪತ್ರಿ

ದುಗಾಹ+ಮುಷ್ಠಿ > ದಂಗಾಮುಸ್ತಿ

ದೋಮ+ಮಜಲ > ದೋಮಜ್ಲ

ದೂಧ+ಪೇಡಾ > ದೂಧಪೇಡಾ

ದೇಶ+ಮುಖಿಯಾ > ದೇಶಮುಖ

ದೂರ+ಮಂಜರ > ದುರಮಂಜಿ

ಜಂಗ+ಕುಸ್ತಿ > ಜಂಗಿಕುಸ್ತಿ

ನಾಕಾ+ಬಂದ > ನಾಕಾಬಂದಿ

ಪಾಂವ+ಬಾಂದ > ಪಾಂವಬಂದ

ಪಾನ+ಪಟ್ಟಿ > ಪಾನಪಟ್ಟಿ

ಬಾಜಾರ+ಬಾವ > ಬಾಜಾರಬಾವ

ಬಾವಾ+ಸಾಹೆಬ > ಬಾವಾಸಾಬ

ಭಾಹದ್ದುರ+ಗಡಿ > ಬಾದ್ದುರಗಡಿ

೩.೨.೨.೧.೨ **ಉರ್ದು+ಉರ್ದು**

ಉಟನ+ಬೈಟಕ > ಉಟಬೈಟಕ

ಎಕ+ಸಾನು > ಎಕಸಾ

ಏಕ+ಏಕ > ಎಕಾಎಕಿ

ಕಟ+ಮಸ್ತ > ಕಟಮಸ್ತ

ಜರದ+ತಾರಿ > ಜರತಾರಿ

ದೇಖ+ರೇಖ > ದೇಖರೇಕ

ಪಾಂಚ+ನಾಮಹ > ಪಂಚ್ನಾಮ

ಪಾಂಚ+ಯತಿ > ಪಂಚಾಯತ > ಪಂಚಾತಿ

ಸಾಡೆ+ಸಾತ > ಸಾಡೆಸತ್ತಿ

ಸಿದಾ+ಸಾದಾ > ಸಿದಾಸಾದಾ

**೩.೨.೨.೨ ಮೂಲ+ಕನ್ನಡ (ಪದ + ಪದ)**

**೩.೨.೨.೨.೧ ಮರಾಠಿ**

ಕರಾರ+ಪತ್ರ > ಕರಾರಪತ್ರ

ಕಾಟ+ಕಾಯಿ > ಕಾಟಕಾಯಿ > ಕಾಟಗಾಯಿ

ಚವಳಿ+ಕಾಯಿ > ಚವಳಿಕಾಯಿ

ಜಂಬಪಲ+ಕಾಯಿ > (ಜಂಬ+ಪಲ+ಕಾಯಿ) ಜಾಪಾಳಕಾಯಿ

**೩.೨.೨.೨.೧.೨ ಪದ+ಪ್ರತ್ಯಯ**

ಖಟ್ಟ+ಅಂತ > ಖಟ್ಟಂತ್ತ

ಗಚಕಾ+ಆನೆ > ಗಚಕ್ಕನೆ

ಗೊಂದಳ+ಇಗ > ಗೊಂದಲಿಗ

ಚಿಂದಿ+ಆಟ > ಚಿಂದಾಟಿ

ಜಾಹಾಗಿರ+ದಾರ > ಜಾಗಿರದಾರ

ಝುಕ+ಇಸ+ಅತ್ತ > ಝುಕುಸ್ತ

ಪೈ+ವಸತಿ > ಪೈವಸ್ತಿ

ಪೈ+ಮಂದಿ > ಪೈಮಂದಿ

ಪೈ+ಊರು > ಪೈಊರು > ಪೈಯೂರ

ಪೈ+ಮಾತು > ಪೈಮಾತು

ಅಕ್ಲ+ಕೇಡಿ > ಅಕ್ಲಗೇಡಿ

೩.೨.೨.೨.೨ ಉರ್ದು (ಪದ+ಪದ)

ಊಧ+ಕಡ್ಡಿ > ಊಧಕಡ್ಡಿ > ಉದಕಡ್ಡಿ

ಊಧ+ಬತ್ತಿ > ಊದಬತ್ತಿ > ಉದಬತ್ತಿ

ಗರಮ+ನೀರ > ಗರಂನೀರ

೩.೨.೨.೨.೨.೨ ಪದ + ಪ್ರತ್ಯಯ

ತಾಬೆ+ಅದ+ಆಗ > ತಾಬೆದಾಗ

ಜರ್ರ+ಅಂತ > ಜರ್ರಂತ

ಪಟ್ಟ+ಅಂತ > ಪಟ್ಟಂತ

ಜಟ್ಟ+ಅಂತ > ಜಟ್ಟಂತ

ಶರಮ+ಕೆಡಿ > ಶರ್ಮಗೇಡಿ

ಖಬರ+ದಾರ > ಖಬರದಾರ

೩.೨.೨.೩ ಕನ್ನಡ + ಮೂಲ

೩.೨.೨.೩.೧ ಮರಾಠಿ

ಕೆಟ್ಟ+ಚಾಳಿ > ಕೆಟ್ಟಚಾಳಿ

ಹಿರಿಯ+ಗಡಿ > ಹಿರಿಗಡ

ನಾಲ್ಕು+ಆನೆ+ಇಯತ್ತಾ > ನಾಕ್ನೆತಿ (ಇಯತ್ತಾ)

ಆರು+ವರಿ > ಆರುವರಿ (ವರಿ)

೩.೨.೨.೩.೨ ಉರ್ದು

ನಾಚಿಗಿ+ಶರ್ಮ > ನಾಚಗಿಶರ್ಮ

ಕಣ್ಣ+ಬಂದ > ಕಣ್ಣಬಂದ (ನಜರಬಂದ)

೩.೨.೨.೪ ಪ್ರತಿಧ್ವನಿ ಪದಗಳು (ಅಲುಕರಣಾವಾಚಿ)

ಅದಲಾ+ಬದಲಾ > ಅದಲಿಬದಲಿ > ಖದಲಿಬದಲಿ (ಉ)

ಅವಡ+ಸವಡ > ಅವಡಾಸವಡಾ > ಅವ್ಡಸವ್ಡ (ಮ)

ಅಬಳಾ+ಚಬಳಾ > ಅಬುಳಚಬುಳ > ಅಬ್ಬಚಬ್ಬ (ಮ)

ಆಜು+ಬಾಜು > ಆಜುಬಾಜು (ಮ)

ಆಸ+ಪಾಸ > ಆಸಪಾಸ (ಉ)

ಖಡಾ+ಖಡಿ > ಖಡಾಖಡಿ (ಉ)

ಗಪ್ಪ+ಚಿಪ್ಪ > ಗಪ್ಪಚಿಪ್ಪ (ಉ)

ತಾಬಡ+ತೊಬಡ > ತಾಬುಡತೊಬುಡ > ತಾಬ್ಡತೊಬ್ಡ (ಮ)

ಧಬ+ಧಬ > ದಬದಬಿ (ಉ)

ಹನ್ನ+ಹುನ್ನಾರ > ಹನ್ನಹುನ್ನಾರ (ಮ)

ದಕ್ಕಾ+ಮುಕ್ಕಿ > ದಕ್ಕಾಮುಕ್ಕಿ (ಉ)

ಸಿದಾ+ಸಾದ > ಸಿದಾಸಾದ (ಉ)

ಕನ್ನಡದಲ್ಲಿ ಪ್ರತಿಧ್ವನಿ ಪದಗಳು ಸಾಮಾನ್ಯವಾಗಿ ಪೂರ್ವಪದ ಅರ್ಥಬದ್ದವಾಗಿದ್ದು, ಉತ್ತರ ಪದ ಅರ್ಥ ರಹಿತವಾಗಿರುತ್ತವೆ(ಮನೆ-ಗಿನೆ, ಹೊಲ-ಗಿಲ). ಆದರೆ ಮರಾಠಿಯ ಪ್ರತಿಧ್ವನಿ ಪದಗಳನ್ನು ಗಮನಿಸಿದಾಗ ಉತ್ತರಪದ ಅರ್ಥಭರಿತವಾಗಿದ್ದು, ಪೂರ್ವಪದವು ಅರ್ಥರಹಿತವಾಗಿರುವುದು ಕಂಡುಬರುತ್ತದೆ. ಅದೇ ಉರ್ದುವಿನ ಪ್ರತಿಧ್ವನಿ ಪದಗಳನ್ನು ನೋಡಿದರೆ ಕನ್ನಡದಂತೆ ಪೂರ್ವಪದ ಅರ್ಥಭರಿತವಾಗಿವೆ. ಆಜು-ಬಾಜು (ಮ), ಧಕ್ಕಾಮುಕ್ಕಿ (ಉ) ಈ ಪದಗಳಲ್ಲಿ ಮರಾಠಿ ಪದವಾದ 'ಆಜುಬಾಜು'ವಿನಲ್ಲಿ ಆಜುವಿಗೆ ಅರ್ಥವಿಲ್ಲ ಬಾಜು (ಪಕ್ಕ)ವಿಗೆ ಅರ್ಥವಿದೆ. ಹಾಗೆಯೇ 'ಧಕ್ಕಾ-ಮುಕ್ಕಿ'ಯಲ್ಲಿ ದಕ್ಕಾ(ತಳ್ಳು)ಗೆ ಅರ್ಥವಿದ್ದರೆ ಮುಕ್ಕಿಗೆ ಯಾವುದೇ ಅರ್ಥವಿಲ್ಲ. ಕನ್ನಡದಲ್ಲಿಯು ಪೂರ್ವಪದಕ್ಕೆ ಅರ್ಥವಿದೆ. ಹೀಗಾಗಿ ಕನ್ನಡ, ಉರ್ದು, ಪದಗಳು ಸಮಾನತೆ ಹೊಂದಿದ್ದು ಮರಾಠಿ ಪದಗಳು ವೈರುಧ್ಯ ರಚನೆ ಹೊಂದಿವೆ.



ಉಳಿದ ರಚನೆ ಉಳ್ಳ ಪದಗಳಲ್ಲಿ ಪದ+ಪದ ಕೂಡುವಾಗ ಎರಡೂ ಸ್ವತಂತ್ರ ರೂಪಗಳು ಸಮಾಸಗೊಂಡಿರುವ ರೂಪಗಳೇ ಹೆಚ್ಚಾಗಿ ಕಂಡುಬರುತ್ತವೆ. ಸಂದಿಗೊಂಡ ಪದಗಳು ಕುಚಿತ, ಮರಾಠಿ ಪದವಾದ ಐಸಾರಾಮ ದಲ್ಲಿ ಸವರ್ಣದೀರ್ಘಸಂಧಿಯ ರಚನೆ ಕಾಣಬಹುದು. ಉರ್ದುವಿನ ಪಂಚ್ನಾಮಿ, ಪಂಚಾತಿ, ಈ ಪದಗಳಲ್ಲು ಸವರ್ಣದೀರ್ಘ ಸಂದಿ ಗುರುತಿಸಬಹುದು. ಪ್ರತ್ಯಯದೊಂದಿಗೆ ಸೇರುವಾಗ ಪದಗಳು ಕನ್ನಡದ -ಅಂತ, -ಆನೆ, -ಅತ್ತ, -ಇಗ, -ದಾರ ಪ್ರತ್ಯಯಗಳನ್ನು ಸ್ವೀಕರಣ ಪದಗಳು ಬಳಸಿಕೊಂಡರೇ ಮರಾಠಿಯ ಪೈ ಮತ್ತು -ಇಯತ್ತಾ ಉರ್ದುವಿನ ಬೇ -ಯಂಥ ಪ್ರತ್ಯಯಗಳನ್ನು ಗುಲಬರ್ಗಾ ಕನ್ನಡ ಬಳಸಿ ಉರ್ದು, ಮರಾಠಿಯ ಪ್ರತ್ಯಯಗಳು ಕೆಲವು ಕನ್ನಡ ಪದಗಳಲ್ಲಿ ಬಳಕೆಗೊಳ್ಳುತಿರುವುದು ವಿಶೇಷ.

### ೩.೧.೩ ಅರ್ಥ

'ಅರ್ಥ' ಎಂಬುದು ಆಶಯ, ತಾನ, ಭಾವನೆ, ಉದಿಶ್ಯಗಳ ಮೊತ್ತವೊಂದು ಐ.ಎ.ರಿಚರ್ಡ್ಸ್ ಅಭಿಪ್ರಾಯಪಡುತ್ತಾರೆ. ಧ್ವನಿಮಾ ಆಕೃತಿಮಾಗಳು ವಸ್ತು, ವ್ಯಕ್ತಿ, ವಿಷಯಗಳನ್ನು ಪ್ರತಿನಿಧಿಸುವುದು ಅರ್ಥ ಪಡೆದುಕೊಂಡಾಗಲೇ. ಅರ್ಥವು ವಸ್ತುಗಳನ್ನು, ವಿಷಯಗಳನ್ನು ಗುರುತಿಸುತ್ತದೆ. ಅವು ಒಂದು ಕಾಲಕ್ಕೆ ಒಂದೇ ವಸ್ತುವನ್ನು ಗುರುತಿಸುತ್ತಿರಬಹುದು, ಇಲ್ಲ ಹಲವು. ಹಾಗೆಯೇ ಒಂದು ವಸ್ತು, ವಿಷಯ ಗುರುತಿಸಲು ಒಂದೇ ಪದವಿರಬಹುದು, ಇಲ್ಲ ಅನೇಕ ಮತ್ತು ಅರ್ಥ ಪ್ರತಿಕಾಲಕ್ಕೂ ಅದೇ ಇರುತ್ತದೆ ಎಂದೂ ಹೇಳಲಾಗದು. ಭಾಷೆಯ ಸಹಜ ಪ್ರವೃತ್ತಿಯಾದ ಪರಿವರ್ತನೆ ಇಲ್ಲಿಯೂ ನಡೆಯುತ್ತದೆ. ಇದು ಭಾಷೆಯ ಮೂಲ ಪದಗಳ ಮಾತಾದರೆ ಬೇರೆ ಭಾಷೆಗಳಿಂದ ಸ್ವೀಕರಿಸಿದ ಭಾಷೆಗಳದ್ದು ಬೇರೆಯಾಗಿರುತ್ತದೆ.

ಅನ್ಯ ಭಾಷೆಯಿಂದ ಸ್ವೀಕರಿಸಿಕೊಂಡ ಪದಗಳು ಮೂಲದಲ್ಲಿ ಪ್ರತಿನಿಧಿಸುತ್ತಿದ್ದ ವಸ್ತು, ವಿಷಯವನ್ನೇ ಸ್ವೀಕರಿಸಿಕೊಂಡು ಭಾಷೆಯಲ್ಲಿಯು ಪ್ರತಿನಿಧಿಸುತ್ತೆ ಎನ್ನುವುದು ಕಷ್ಟ. ಅದು ಸ್ವೀಕರಿಸಿಕೊಂಡ ಭಾಷೆಯು ಅವಶ್ಯಕತೆಗನುಗುಣವಾಗಿ ಈ ಪದಗಳು ಹೊಸ ಅರ್ಥ ಹೊಂದಬಹುದು, ಇಲ್ಲ ಮೂಲಾರ್ಥದಲ್ಲೆ ಬಳಕೆಗೆ ಬರಬಲ್ಲವು. ಕೆಲವು ಸಲ ಮೂಲಾರ್ಥವನ್ನೇ ಪ್ರತಿನಿಧಿಸುತ್ತಿದ್ದರು. ಸ್ವೀಕರಣಗೊಂಡ ಭಾಷೆಯಲ್ಲಿ ಅದೇ ಅರ್ಥದ ಇನ್ನೊಂದು ಪದವಿದ್ದಾಗ ಈ ಪದಕ್ಕೆ ಸೂಕ್ಷ್ಮಾರ್ಥ ಬರುವ ಸಾಧ್ಯತೆ ಇದೆ. ಉದಾಹರಣೆಗೆ ಕಾಗದ, ಪತ್ರ ಈ ಎರಡಕ್ಕೂ ಒಂದೇ ಅರ್ಥವಿದ್ದರೂ, ಭಿನ್ನ ಸೂಕ್ಷ್ಮಾರ್ಥವನ್ನು ಪ್ರತಿನಿಧಿಸುತ್ತಿವೆ. ಸ್ವೀಕರಿಸಿದ ಭಾಷೆಯಲ್ಲಿ ಅದೂ ಮೂಲಾರ್ಥವನ್ನೆ ಪ್ರತಿನಿಧಿಸುತ್ತಿದ್ದು, ಆ ಅರ್ಥವೆ ಹೊಂದಿರುವ ಪದ ಮೂಲದಲ್ಲಿದ್ದರೆ ಮೂಲದ ಪದ ಮೂಲೆ ಗುಂಪಾಗುವ ಸಾಧ್ಯತೆ ಇದೆಯೆಂದು ಕೆ.ವಿ. ನಾರಾಯಣ (೨೦೧೦) ಅವರು ಹೇಳುತ್ತಾರೆ.

ಗುಲಬರ್ಗಾ ಕನ್ನಡಕ್ಕೆ ಸ್ವೀಕರಣವಾಗಿ ಬಂದಿರುವ ಪದಗಳಲ್ಲಿ ಆಗಿರುವ ಅರ್ಥ ವ್ಯತ್ಯಾಸವನ್ನು ಇಲ್ಲಿ ವಿವರಿಸಲಾಗಿದೆ.

#### ೩.೧.೩.೧ ಅರ್ಥ ವ್ಯತ್ಯಾಸ ಹೊಂದಿರುವ ಪದಗಳು

| ಸ್ವೀ.ಪದ | ಮೂಲ ಅರ್ಥ | ಕನ್ನಡ ಅರ್ಥ |
|---|---|---|
| ಐನಾತಿ (ಉ) | ಮುಖ್ಯವಾದ | ತೊಡಕು, ಅನಿಷ್ಠ |

* ಐನ (ಮರಾ) - ಪ್ರಧಾನ, ಮಾನ್ಯ > ಸರಿಯಾದ

(ಉ) ಆಯಕಟ್ಟು > ಮುಖ್ಯವಾದ

೧. ಐನ್ ಮಾತೆ ನೆಂಪೊಗಿತಲೊ ನೆಂಪುಸಿ ಛಂದಮಾಡ್ದಿ

೨. ಐನ್ ಟೈಮಿಗ ರೊಕ್ಕಾ ಕೊಟ್ಟಿ ಇಜ್ಜತ ಉಳ್ಸುದಪ್ಪಾ

* ಕರಾರ (ಉ) - ಓಪಂದ > ನಿರ್ಬಂಧ

೧. ಅಂವಾ ನಮ್ಮನಿಗ ಬರಾ ಆಗಾತಿ ಇಲ್ಲಾಂತ ಕರಾರ ಮಾಡಬಾ

* ಖಟಂತ (ಉ) - ಖಚಿತ > ತಕ್ಷಣಕ್ಕೆ, ಸಂಪೂರ್ಣವಾಗಿ

೧. ಆ ಡಾಕ್ಟರ ಕೈಗುಣ ಬಾರಿದಾ ಒಂದೇ ಗೊಲಿಗ ಬಟ್ಟಂತ ಕಮ್ಮಾಯ್ತು ನೋಡು

* ಕಡಕ(ಉ) - ಗಟ್ಟಿ > ಒಣಗಿದ, ಬಿರುಸಾದ, ಸಿಡುಕಿನ ಸ್ವಭಾವ

೧. ನಿಮಪ್ಪ ಬಾರಿ ಕಡಕ ಮನಷ್ಯ ಬಿಡು ಯಾವಂದ ಬಿ ಕೆಳಾಲಂವ

೨. ಒಣಗಿ ಕಡಕ ತೊಗುಲಾಗ್ಯಾದ

* ಖಡಿ(ಉ) - ನೇರ > ನೆಟ್ಟಗೆನಿಂತ, ನೀತಿವಂತ, ನ್ಯಾಯ ಪರವಾದ

೧. ಅಲ್ಲೆ ಖಡಿ ನಿಂತ್ಯಾಲ, ಒಳ್ಗಬಾ

೨. ರಾಮಣ್ಣ ಬಾರಿ ಖಡಿ ಮನಶ್ಯ ಪಾಪ ಯಾಂವದ ಬಿ. ಒಂದುಡ್ಡ ತಿಂದಾಂವಲ್ಲ

೩. ಖಡಿ ಮಾತಾಡ್ರೊ ನಾಕ ದಿನಾ ಬಾಳತಿರಿ ಇಲ್ಲಾ ಹಕನಾಕೆ ಸಾಯಿತಿರಿ

* ಖಾತರಿ-ಚರ್ಚೆ, ನಂಬಿಕೆ, ವಿಶ್ವಾಸ, > ನಿಜವಾದದ್ದು, ನಂಬಿಕೆ, ಸತ್ಯವಾದದ್ದು

೧. ರಾಜಕಿದಾಗೆ ಅಂವಾ ಒಬ್ನೆ ಖಾತ್ರಿ ಮನಶ್ಯಾ ಹನಾ

* ಗುಂಗ(ಮ), ಅಮಲು ನಶೆ > ಧ್ಯಾನ

೧. ಯಾ ಗುಂಗನ್ಯಾಗ ಹನಾನೋ ಮಾತ್ಯಾಡುರ ಮಾತಾಡಾಲೆ ಆಗ್ಯಾನ

* ಚೆಲಾ, ಹಿಂಬಾಲಕರು, ಶಿಷ್ಯ , ಅನುಯಾಯಿ > ಆಜ್ಞಾಪಾಲಕರು, ಹೊಗಳುಭಟ್ಟರು

೧. ಅದುರ್‍ಯಾರು ಕೆಳ್ತಾರ ಬಿಡು ಹೆಣ್ತಿ ಚೆಲಾದಾ ಅದು

* ಪಾರ(ಉ)- ಸಂಕಷ್ಟದಿಂದ ಬಿಡಿಸಿಕೊ, ಬದುಕು > ಹಿಂದಿರುಗದಂತೆ ಹೋಗು, ಒಂದಷ್ಟು ಇಲ್ಲದಂತೆ ತೆಗೆದುಕೊ

೧. ಎಲ್ಲಿದ್ದೊ ಇಲ್ಲಿ ತನಕಾ ಮುಂಜಾನಿ ಹೊದಾಂವ ಪಾರ ಆಕಾಡೆ ಹೊಗಾದು?

೨. ಪಾರ ಎಲ್ಲಾ ನಿಕಾಲೆ ಮಾಡ್ಯಾರ, ಹಿಂದ ಬಂದವ್ರಿಗ ಏನೂಸಿಕ್ಕಿಲಂದ

* ಬೇವರ್ಸಿ(ಮ), ಅನಾಥ > ಅನಿಷ್ಟ

೧. ಎಲ್ಲಾ ಛಲೋನೇ ನಡದಿತೋ ಆ ಬೆವರ್ಸಿ ಬಂದಿ ಎಲ್ಲಾ ಕೆಡಸಿಡ್ತು

* ಹಲ್ಕಾ, ಹಗುರ, ತೆಳ್ಳಗಿನ, ಕನಿಷ್ಟ > ಅನೈತಿಕವಾದದ್ದು

೧. ಹಲ್ಕಾ(ಉ) ಮಂದಿ ಸೊಬತಿ ಮಾಡುರ ಬಾಳ್ಯಾ ಮಾಡುಕಾತಾದೆನು

* ಅನಾಮತ್ತ(ಉ), ಕೆಲಸದಿಂದ ತೆಗೆದುಹಾಕು > ನಿಧಾನವಾಗಿ, ಆಯಾಸವಿಲ್ಲದೆ, ಲೆಕ್ಕಕ್ಕೆ ತೆಗೆದುಕೊಳ್ಳದೆ ಕೊಡುವ

೧. ಸೆಂಬೊರಕಿಲೊ ಅನಾಮತೆ ಎತ್ತಿನಿ

೨. ಹಂಗೆ ಅನಾಮತ್ತಾಗಿ ಹಜಾರ ರುಪೈ ಇಸಗೊಂಡಿ ವಾಪಸೆ ಮಾಡಿಲಂವಾ

೩. ಹಿಂದಿಂದ್ದು ಅನಾಮತ ಬಾ (ನಂತರ ನಿಧಾನವಾಗಿ ಬಾ)

* ಟಾಕಿ(ಉ), ಹೊಲಿಗೆ > ಹೆದರು

೧. ನಮ್ಮಪಾರ ಅವರಪ್ಪಗ ನೊಡ್ತಂದುರ ಅದುರ ಟಾಕಿನೆ ಢಿಲಾ ಆತಾವ

* ಪಾವಬಂದ(ಮ), ಕುದುರೆಗೆ ಎರಡೂ ಕಾಲು ಕಟ್ಟುವುದು > ಹದ್ದುಬಸ್ತು

೧. ಅವರ ಮಕ್ಕಳಿಗ ಬಾರಿ ಪಾವಬಂದನ್ಯಾಗ ಇಟಗೊಂಡಾರ

* ಪುಡಾರಿ(ಮ) - ಗುಂಪಿನಾಯಕ, ಮುಖಂಡ > ಕೆಟ್ಟವ, ದುರುಳ

೧. ಪುಡಾರಿಗೊಳಿಗೆಲ್ಲ ಮಕ್ಕಳ ಕೊಟ್ಟುರ ಅವ್ರುದ್ರ ಹೊಟ್ಟೆಗತಿ ಯೆನು

* ಬಿದಾಯಿ(ಉ) - ಬಿಳ್ಕೊಡು > ಹೊಡೆತಬಿಳು

೧. ಮನಿಗ ಬಾ ಇವತದಾ ನಿಂಗ ಛೆಂದ ಬಿದಾಯಿ

ಮೇಲಿನ ಉದಾಹರಣೆಗಳು ಗುಲಬರ್ಗಾ ಕನ್ನಡವು ಕೆಲವು ಹೊಸ ಅರ್ಥಗಳನ್ನು ಸೃಷ್ಟಿಸಿ ಕೊಂಡಿವೆ.ಕೆಲವು ಪದಗಳು ಹೀನಾರ್ಥ ಪಡೆದುಕೊಂಡಿರುವುದು ಕಾಣುತ್ತೇವೆ. ಪುಡಾರಿ, ಬೆವರ್ಸಿ, ಹಲ್ಕಾ ಇಂತಾ ಪದಗಳು ಅರ್ಥದ ನೆಲೆಯಲ್ಲಿ ಪಡೆದಿರುವ ಹೊಸ ಸ್ವರೂಪವನ್ನು ಗುರುತಿಸಬಹುದು.

## ಅಧ್ಯಾಯ ನಾಲ್ಕು

# ಗುಲಬರ್ಗಾ ಕನ್ನಡ ನುಡಿ: ಸ್ವೀಕೃತ ಕ್ರಿಯಾಪದಗಳ ರಚನೆ

**ಭಾ**ಷೆಯ ಅಂತಃಸತ್ವ ಅಡಗಿರುವುದು ಆ ಭಾಷೆಯ ನಾಮಪದ ಮತ್ತು ಕ್ರಿಯಾಪದಗಳಲ್ಲೇ ನಾಮಪದ ಹೇಳಬೇಕಾಗಿರುವ ಸಂಗತಿಯನ್ನು ಪ್ರಾರಂಭಿಸಿದರೆ, ಕ್ರಿಯಾಪದ ಮುಗಿಸುತ್ತದೆ. ನಾಮಪದ, ಕ್ರಿಯಾಪದಗಳು ಭಾಷೆಯ ಎರಡು ಕಣ್ಣಿದ್ದಂತೆ. ಉಳಿದವುಗಳನ್ನು ಇವುಗಳ ಶೃಂಗಾರಕ್ಕಿಟ್ಟ ವಸ್ತುಗಳೆನ್ನ ಬಹುದೇನೊ. ನಾಮಪದಗಳ ಮತ್ತು ಕ್ರಿಯಾಪದಗಳ ನಡುವೆ ಆಂತರಿಕ ರಚನೆಯಲ್ಲಿ ಅನೇಕ ವ್ಯತ್ಯಾಸಗಳಿವೆ. ಅವಕ್ಕೆ ಅವುಗಳ ವಾಕ್ಯದಲ್ಲಿ ನಡೆಸಬೇಕಾಗಿರುವ ಭಿನ್ನ ಕಾರ್ಯಗಳು ಮತ್ತು ಅವು ಪಡೆದುಕೊಳ್ಳುವ ಪ್ರತ್ಯಯಗಳೇ ಕಾರಣವಾಗಿರುತ್ತವೆ. ನಾಮಪದಕ್ಕೆ ವ್ಯಕ್ತಿ, ವಸ್ತು, ವಿಷಯ ಮೊದಲಾದವುಗಳನ್ನು ಹೆಸರಿಸುವ, ವರ್ಣಿಸುವ ಕೆಲಸವಾದರೆ, ಕ್ರಿಯಾಪದ ಘಟನೆಯನ್ನು ನಿರ್ದೇಶಿಸುತ್ತದೆ. ಅಲ್ಲದೇ ನಿಷೇಧಿಸುವ, ಪ್ರಶ್ನಿಸುವ, ವಿಧಿಸುವ ಮೊದಲಾದ ಭಾಷಾ ವ್ಯಾಪಾರದಲ್ಲಿ ತೊಡಗಿ ವಸ್ತು, ವಿಷಯ, ವ್ಯಕ್ತಿ ಎಸಗುವ ಕೆಲಸವನ್ನು ವಿವರಿಸುತ್ತದೆ.

ಕ್ರಿಯಾಪದಗಳು ಒಂದು ವಾಕ್ಯದ ಬಹುಮುಖ್ಯ ಅಂಗ. ವಾಕ್ಯದ ಕೊನೆಯ ಭಾಗದಲ್ಲಿ ಬಂದು ವ್ಯಕ್ತಿ, ವಸ್ತು, ವಿಷಯ ಎಸಗುವ ಕ್ರಿಯೆಯನ್ನು, ಸ್ಥಿತಿಯನ್ನು, ಘಟನೆಯನ್ನು ವಿವರಿಸುತ್ತದೆ. ಕ್ರಿಯಾಪದಗಳು ಮುಚ್ಚಿದ ಭಾಷಾ ಘಟಕಗಳು. ಅವುಗಳು ಸುಲಭವಾಗಿ ಬದಲಾವಣೆಗೆ ಒಳಗಾಗುವ ಅಥವಾ ಸ್ವೀಕರಣ ಪ್ರಕ್ರಿಯೆಯಂತಹ ಭಾಷಿಕ ಬದಲಾವಣೆಗೆ ಒಳಗಾಗುವುದಿಲ್ಲ.

ಗುಲಬರ್ಗಾ ಕನ್ನಡವು ಸ್ವೀಕರಿಸಿಕೊಂಡಿರುವ ಅನ್ಯ ಭಾಷೆಯ ಒಟ್ಟು ಪದಗಳನ್ನು ಗಮನಿಸಿದಾಗ ಅವುಗಳಲ್ಲಿ ಕ್ರಿಯಾಪದಗಳ ಸಂಖ್ಯೆ ಕಡಿಮೆಯೇ. ಇದು ಈ ಹಿಂದೆ ಹೇಳಿದಂತೆ ಕ್ರಿಯಾಪದಗಳ ಮುಚ್ಚಿದ ವರ್ತನೆಯೇ ಕಾರಣವಾಗಿರಬೇಕು. ಕ್ರಿಯಾಪದಗಳು ಸ್ವೀಕರಣಕ್ಕೆ ಒಳಗಾಗುವುದೇ ಇಲ್ಲ. ಒಂದು ವೇಳೆ ಒಂದು ಭಾಷೆಯ ಕ್ರಿಯಾಪದಗಳು ಇನ್ನೊಂದು ಭಾಷೆಯಲ್ಲಿವೆ ಎಂದರೆ ಅವುಗಳು

ನಾಮಪದದ ಅಂಗವಾಗಿ ಬಂದು ಆನಂತರ ಸ್ವತಂತ್ರವಾಗಿರುತ್ತವೆ. ಪ್ರಸ್ತುತ ನಾನು ಕ್ಷೇತ್ರಕಾರ್ಯದ ವೇಳೆಯಲ್ಲಿ, ಸ್ವೀಕರಣ ಪದಗಳನ್ನು ಸಂಗ್ರಹಿಸುವಾಗ ಮತ್ತು ಅವುಗಳ ಬಳಕೆಯಲ್ಲಿ ಕಂಡುಕೊಂಡ ಅಂಶಗಳಲ್ಲಿ; ಅವುಗಳು ಸ್ವೀಕರಣಗೊಂಡ ಭಾಷೆಯಲ್ಲಿ ಮೂಲ ಕ್ರಿಯಾಸೂಚಕ ಗುಣವನ್ನು ಕಳೆದುಕೊಳ್ಳುತ್ತವೆ.

ಕನ್ನಡಕ್ಕೆ ಸ್ವೀಕರಣಗೊಂಡಿರುವ ಅಥವಾ ಯಾವುದೇ ಭಾಷೆಗೆ ಸ್ವೀಕರಣಗೊಳ್ಳುವ ಕ್ರಿಯಾಪದಗಳು ಅವುಗಳ ಮೂಲದ ಬಳಕೆಯಂತೆ ಸ್ವತಂತ್ರವಾಗಿ ಕ್ರಿಯೆಯನ್ನು ವಿವರಿಸಲು ಸಾಧ್ಯವಿಲ್ಲ. ಅವುಗಳ ಬಳಕೆ ನೋಡಿದರೆ ನಾಮಪದಗಳ ಬಳಕೆಯಂತಿರುತ್ತದೆ. ("Though some verbs have come to Kannada along with of there foreign loans, they are found to be used as abstaract noun's only" ಕೇದಿಲಾಯ, ೧೯೭೦, ೧೦) ಈ ಹೇಳಿಕೆ ಮೇಲಿನ ಹೇಳಿಕೆಯನ್ನು ಸ್ಪಷ್ಟಪಡಿಸು ವಂಥದ್ದಾಗಿದೆ. ಇದಕ್ಕೆ ಅನೇಕ ಉದಾಹರಣೆಗಳನ್ನು ಕೊಡಬಹುದು.

ರನ್ಓಡು

ಕ್ಯಾಚ್‌ಹಿಡಿ

ಸ್ಪಾಟ್‌ಮಾಡು

ಚಾಲುಆಗು

ಖರಾಬಮಾಡು ಇತ್ಯಾದಿ

ಈ ಪದಗಳು ನಾಮಪದದ ಅಂಗವಾಗಿ ಬಂದಿರುವ ಸಾಧ್ಯತೆಗಳನ್ನು ಗಟ್ಟಿಗೊಳಿಸುತ್ತವೆ. ಈ ನಿಟ್ಟಿನಲ್ಲಿ ಇನ್ನೊಂದು ಊಹೆ ಮಾಡಲು ಸಾಧ್ಯವಿದೆ. ಕನ್ನಡದಲ್ಲಿ ಕ್ರಿಯಾಪದಗಳನ್ನು ಪ್ರತ್ಯಯ ಸೇರಿಸಿ ನಾಮಪದ ಮಾಡುವ (ಹಾಸು > ಹಾಸುಗೆ, ಅಡು > ಅಡುಗೆ, ತೊಡು > ತೊಡುಗೆ) ಪ್ರಕ್ರಿಯೆಯೊಂದಿದೆ. ಈ ಪ್ರಕ್ರಿಯೆ ಕನ್ನಡ ಸ್ವೀಕರಣ ಮಾಡಿಕೊಂಡಿರುವ ಪದಗಳ ಮೂಲ ಭಾಷೆಯಲ್ಲಿಯು ಇದ್ದು, ಅವುಗಳು ಪ್ರತ್ಯಯದೊಂದಿಗೆ ಸೇರಿ ಕ್ರಿಯಾ ನಾಮಪದಗಳಾಗಿ ಬದಲಾಗಿರಬೇಕು. ಆ ಕಾಲಕ್ಕೆ ಕನ್ನಡ ಪರಿಸರಕ್ಕೆ ನಾಮಪದವಾಗಿ ಸ್ವೀಕರಣಗೊಂಡು ಕಾಲಾಂತರದಲ್ಲಿ ಮೂಲ ಪ್ರತ್ಯಯ ಬಿದ್ದು ಹೋಗಿ ಅಲ್ಲಿ ಕನ್ನಡ ಪ್ರತ್ಯಯ ಅಥವಾ ಧ್ವನಿರೂಪ ಪ್ರತ್ಯಯ ಬಂದಿರಬೇಕು. ಇಲ್ಲಾ ಕನ್ನಡ ಪರಿಸರ ಆ ಪ್ರತ್ಯಯ ಯುಕ್ತ ಕ್ರಿಯಾಪದಗಳನ್ನು ಸಹಜ ನಾಮಪದಗಳೆಂದು ಭಾವಿಸಿ ಸ್ವೀಕರಿಸಿಕೊಂಡು ಬಳಕೆಗೆ ತಂದಿರಬೇಕು. ಅವು ಕನ್ನಡದ ಬದಲಾವಣೆ ಪ್ರಕ್ರಿಯೆಯಲ್ಲಿ ಸಿಕ್ಕಿ ಮಾರ್ಪಾಡುಗಳೊಂದಿಗೆ ಬಳಕೆಗೆ ಬಂದಿರಬೇಕು. ಈ ಕಾರಣಕ್ಕಾಗಿಯೆ ಅನ್ಯ ಭಾಷೆಯ ಪದಗಳಿಗೆ –ಇಸು ಪ್ರತ್ಯಯ ಪ್ರೇರಣಾರ್ಥಕವಾಗಿ ಬಳಕೆಗೊಳ್ಳುವುದಿಲ್ಲ. ಈ ನಿಟ್ಟಿನಲ್ಲಿ ಒಂದಷ್ಟು ಅಧ್ಯಯನಗಳು ಬಂದರೆ ಅವುಗಳ ಚಾರಿತ್ರಿಕ ನೆಲೆಗಳನ್ನು ಅರಿಯಲು ಸಾಧ್ಯವಾಗಬಲ್ಲದು.

ಈ ಮೇಲಿನ ಎಲ್ಲಾ ವಿಚಾರಗಳನ್ನು ಗುಲಬರ್ಗಾ ಕನ್ನಡದ ಸ್ವೀಕರಣ ಪದಗಳು ಚಾಚು ತಪ್ಪದೇ ಪಾಲಿಸಿಕೊಂಡು ಬಂದಿವೆ. ಗುಲಬರ್ಗಾ ಕನ್ನಡಕ್ಕೆ ಉರ್ದು, ಮರಾಠಿ, ಅರೇಬಿಕ್ ಭಾಷೆಗಳಿಂದ ಅನೇಕ ಕ್ರಿಯಾಪದಗಳು ಸ್ವೀಕರಣವಾಗಿ ಬಂದಿವೆ. ಅವುಗಳ ರಾಚನಿಕ ನೆಲೆಗಟ್ಟನ್ನು ಗುರುತಿಸುವ ಕೆಲಸ ಇಲ್ಲಿ ಮಾಡಲಾಗಿದೆ.

೫.೧. **ಧ್ವನಿಮಾ ಹಂತ**

೫.೧.೧. **ಸ್ವರದಿಂದ ಪ್ರಾರಂಭವಾಗುವ ಪದಗಳು**

೫.೧.೧.೧ *ಸ್ವ+ವ್ಯ+ವ್ಯ+ಸ್ವ(ದಿ)+ವ್ಯ+ಸ್ವ(ದಿ)*

ಉಲ್ಪಾದಾ (ಉ)

೫.೧.೧.೨ *ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ*

ಅಕಡಾಸು, ಅಟಕಾಸು (ಮ)

೫.೧.೧.೩ *ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ*

ಆರಾಮಾಗು (ಉ)

೫.೧.೧.೪ *ಸ್ವ+ವ್ಯ+ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ*

ಉಲ್ಟಾಮಾಡು (ಮ)

೫.೧.೧.೫ *ಸ್ವ+ವ್ಯ+ವ್ಯ+ಸ್ವ(ದಿ)+ಸ್ವ(ದಿ)+ವ್ಯ+ಸ್ವ(ದಿ)*

ಉಲ್ಪಿಆಗು (ಉ)

೫.೧.೧.೬ *ಸ್ವ+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ*

ಅವಾಜಹಾಕು, ಅಗಾವಮಾಡು

೫.೧.೧.೭ *ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ*

ಆರಾಮಮಾಡು (ಉ)

೫.೧.೧.೮ *ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ*

ಅಡಚಣಾಗು (ಮ)

೫.೧.೧.೯ *ಸ್ವ+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)*

ಅಗಾವಹನಾ (ಮ)

೫.೧.೧.೧೦ ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)

ಅಡಚಣದಾ (ಮ)

೫.೧.೧.೧೧ ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ಅಟಕಾವಮಾಡು (ಮ)

೫.೧.೧.೧೨ ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ಅಡಚಣ ಮಾಡು (ಮ)

೫.೧.೨. ವ್ಯಂಜನಗಳು

೫.೧.೨.೧ ಮೂರಕ್ಷರ

೫.೧.೨.೧.೧ ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

| (ಮರಾಠಿ) | (ಉರ್ದು) |
|---|---|
| ಛಪಾಸು, ಜಮಾಸು, | ಕಮಾಸು, ಖಿಲಾಸು, |
| ಟಿಕಾಸು, ಟಿಪಾಸು | ಚಡಾಸು, ಚುಡಾಸು |
| ಠರಾಸು, ಪಟಾಸು, | ಜುಕಾಸು, ದಭಾಸು, |
| ಫಸಾಸು | ನಿಭಾಸು, ಬಚಾಸು, |
| | ಬಡಾಸು, ಲಗಾಸು, ಸತಾಸು |

೫.೧.೨.೧.೨ ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ

ಜಾಣಾಸು (ಮ), ಪಾರಾಗು (ಉ)

೫.೧.೨.೧.೩ ವ್ಯ+ಸ್ವ+ವ್ಯ+ವ್ಯ+ಸ್ವ+ವ್ಯ+ಸ್ವ

ಜಪ್ಪುಸಿ (ಮ)

೫.೧.೨.೧.೪ ವ್ಯ+ಸ್ವ(ದಿ)+ವ್ಯ+ವ್ಯ+ಸ್ವ(ದಿ)+ವ್ಯ+ಸ್ವ

ಪೌಂಚಾಸು (ಉ)

೫.೧.೨.೧.೫ ವ್ಯ+ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ

ದ್ಯಾಸಾಗು (ಮ)

೫.೧.೨.೧.೬ ವ್ಯ+ಸ್ವ+ವ್ಯ+ವ್ಯ+ಸ್ವ(ದಿ)+ವ್ಯ+ಸ್ವ

ಫಚ್ಚಾಗು (ಮ)

೫.೧.೨.೨. ನಾಲ್ಕಕ್ಷರ

೫.೧.೨.೨.೧ ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ

ಕರಾರಾಗು (ಮ) ಖರಾಬಾಗು (ಉ)

ಪುಕಾರಾಗು (ಮ) ಬಿದಾಯಾಗು (ಉ)

೫.೧.೨.೨.೨ ವ್ಯ+ಸ್ವ+ವ್ಯ+ವ್ಯ+ಸ್ವ +ಸ್ವ(ದಿ)+ವ್ಯ+ಸ್ವ

ಬರ್ತಿಆಗು (ಉ)

೫.೧.೨.೨.೩ ವ್ಯ+ಸ್ವ+ವ್ಯ+ಸ್ವ +ವ್ಯ+ಸ್ವ+ವ್ಯ+ಸ್ವ

ಖವಳುಸು (ಮ)

೫.೧.೨.೨.೪ ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

(ಮರಾಠಿ) (ಉರ್ದು)

ಚವುಕಾಸು, ಚಿಟಕಾಸು, ಜಡಕಾಸು, ಬದಲಾಗು

ಪುಸಲಾಸ್ಸು, ಗಡುಪಾಗು

೫.೧.೨.೨.೫ ವ್ಯ+ಸ್ವ+ವ್ಯ+ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ

ಚುಕ್ತಾಮಾಡು (ಉ)

೫.೧.೨.೨.೬ ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ

ನಿಗಾಮಾಡು (ಉ)

೫.೧.೨.೨.೭ ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ

ದೋಕಾಮಾಡು (ಉ) ಹೈಗೈ ಮಾಡು (ಮ)

೫.೧.೨.೨.೮ ವ್ಯ+ಸ್ವ+ವ್ಯ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ಡಂಗಿಮಾಡು (ಮ) ಪಲ್ಲಿಮಾಡು (ಉ)

೫.೧.೨.೨.೯ ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

(ಮರಾಠಿ) (ಉರ್ದು)

ಟಾಕಿಹಾಕು ಚಾಲುಮಾಡು, ಲೂಟಿಮಾಡು,

ಫೇರಹಾಕು, ಸೂಟಿಕೊಡು

೫.೧.೨.೨.೧೦ ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)

ಚಾಲುಹನಾ (ಉ)

೫.೧.೨.೨.೧೧ ವ್ಯ+ಸ್ವ+ವ್ಯ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ

ಪಲ್ಟಿಬಿಳು (ಉ)

೫.೧.೨.೨.೧೨ ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ಛಾಡಿಹೇಳು (ಮ)

೫.೧.೨.೩. ಐದಕ್ಷರ

೫.೧.೨.೩.೧ ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

| (ಮರಾಠಿ) | (ಉರ್ದು) |
|---|---|
| ಹುಡದಿಹಾಕು, ಗಡುಪಮಾಡು | ಬದಲಿಮಾಡು, ಧಮಕಿಹಾಕು, |
| | ವಸುಲಿಮಾಡು |

೫.೧.೨.೩.೨ ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

| (ಮರಾಠಿ) | (ಉರ್ದು) |
|---|---|
| ಕರಾರಮಾಡು, ವಟಾಳಿಮಾಡು | ತಪಾಸಮಾಡು, ಬಚಾವಮಾಡು |
| ಲಿಗಾಡಹೇಳು, ಬಟಾಯಿಕೊಡು | ಬಿದಾಯಿಮಾಡು, ಬರಾಬರ |
| ಕರಾರಹಾಕು, ಠಿಕಾಣಿಹುಡು | ಮಾಡು |

೫.೧.೨.೩.೩ ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ಚೌಕಾಸಿಮಾಡು (ಮ)

೫.೧.೨.೩.೪ ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ತಾಕಿತಮಾಡು (ಉ)

೫.೧.೨.೩.೫ ವ್ಯ+ಸ್ವ+ವ್ಯ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ಧಾಂದಲಿಮಾಡು (ಮ)

೫.೧.೨.೩.೬ ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ+ಸ್ವ(ದಿ)+ವ್ಯ+ಸ್ವ

ವಟಾಳಿಆಗು (ಮ)

೫.೧.೨.೩.೭ ವ್ಯ+ಸ್ವ+ವ್ಯ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ಗೊಂದುಲಹಾಕು (ಮ)

೫.೧.೨.೩.೮ ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)

ಬರಾಬರಹನಾ (ಉ)

೫.೧.೨.೩.೯ ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ಸ್ವ+ವ್ಯ+ಸ್ವ

ಖನಸಿಇಡು (ಮ)

೫.೧.೨.೩.೧೦ ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ

ಫರಾಕಬಿಳು, ತಪಾಸತೊಗೊ (ಉ)

೫.೧.೨.೩.೧೧ ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ಭಮಟಿಹೇಳು (ಮ)

೫.೧.೨.೪. ಆರಕ್ಷರ

೫.೧.೨.೪.೧ ವ್ಯ+ಸ್ವ(ದಿ)+ವ್ಯ+ಸ್ವ +ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ ಸ್ವ

ದೇಖರೇಖಮಾಡು (ಉ)

೫.೧.೨.೪.೨ ವ್ಯ+ಸ್ವ+ವ್ಯ+ಸ್ವ +ವ್ಯ+ಸ್ವ(ದಿ)+ವ್ಯ+ಸ್ವ +ವ್ಯ+ಸ್ವ(ದಿ)+ವ್ಯ+ಸ್ವ

ನಿಗರಾಣಿಮಾಡು (ಉ)

೫.೧.೨.೪.೩ ವ್ಯ+ಸ್ವ+ವ್ಯ+ವ್ಯ+ಸ್ವ +ವ್ಯ+ಸ್ವ(ದಿ)+ವ್ಯ+ಸ್ವ +ವ್ಯ+ಸ್ವ(ದಿ)+ವ್ಯ+ಸ್ವ

ಪಂಚನಾಮಿಮಾಡು (ಉ)

೫.೧.೨.೪.೪ ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ಬರಾಬರಿಮಾಡು (ಉ)

ಈ ರಚನೆಗೆ ಕನ್ನಡ ಕ್ರಿಯಾಪದಗಳ ರಚನೆಗಳು ಹೊರತಾದುದಲ್ಲ ಆದರೂ, ಪದಗಳ ಕಟ್ಟುವಿಕೆಯಲ್ಲಿನ ವ್ಯತ್ಯಾಸಗಳು ಅವುಗಳ ಧ್ವನಿಮಾತ್ಮಕ ರಚನೆಯಲ್ಲಿ ವ್ಯತ್ಯಾಸಕ್ಕೆ ಕಾರಣವಾಗಿವೆ. ಇವುಗಳು ಕನ್ನಡ ಕ್ರಿಯಾ ಧಾತುಗಳನ್ನು ಸೇರಿಕೊಂಡು ಕನ್ನಡದಲ್ಲಿ ಕ್ರಿಯಾಪದಗಳಾಗಿ ಪರಿವರ್ತನೆ ಆಗಿರುವುದರಿಂದ ಇವುಗಳ ರಚನೆಯಲ್ಲಿ ಏರುಪೇರಾಗಿದೆ. ಕೆಲವು ಪದಗಳು ಸಮಾಸಗೊಳ್ಳುತ್ತಿದ್ದರೆ, ಕೆಲವು ಸಂಧಿಗೊಳ್ಳುತ್ತಿವೆ. ಕೆಲವು ಪದಗಳು ಕನ್ನಡ ಕ್ರಿಯಾಧಾತು ಕೂಡುವಾಗ ಕನ್ನಡ ರಚನೆಯ ವಿರುದ್ಧ ರಚನೆಯನ್ನು ಪಡೆದುಕೊಳ್ಳುತ್ತಿವೆ. ಸ್ವರದಿಂದ ಪ್ರಾರಂಭವಾಗುವ ಕನ್ನಡ ಕ್ರಿಯಾ ಧಾತುಗಳನ್ನು

ಸೇರಿಸಿ ಸಮಾಸಗೊಂಡಿರುವ ಪದಗಳಲ್ಲಿ ಪದಮಧ್ಯದ ಸ್ವರವು ಸ್ವತಂತ್ರವಾಗಿ ಬಳಕೆಗೊಳ್ಳುತ್ತಿದೆ. (ಸ್ವ+ವ್ಯ+ಸ್ವ(ದಿ)+ಸ್ವ(ದಿ)+ವ್ಯ+ಸ್ವ ಉಲ್ಪಾಆಗು) ಇಂತಹ ಸಂಕೀರ್ಣ ರಚನೆಯು ನಿರ್ಮಾಣವಾಗುತ್ತಿದೆ. ಇದು ಕನ್ನಡ ಸಂದರ್ಭದಲ್ಲಿ ವಿವರಿಸುವುದು ಕಷ್ಟ. ಕನ್ನಡದಲ್ಲಿ ಪದದ ಮಧ್ಯದಲ್ಲಿ ಸ್ವತಂತ್ರ ಸ್ವರ ಬಳಕೆ ಕಂಡುಬರುವುದಿಲ್ಲ. ಪದಗುಚ್ಚಗಳಲ್ಲು ಕಾಣುವುದಿಲ್ಲ. ಅವುಗಳು ಇಲ್ಲಿ ಕನ್ನಡ ನಿಯಮಕ್ಕನುಸಾರ ಸಂಧಿಗೊಳ್ಳದಿರುವುದು ಕಂಡುಬರುತ್ತದೆ.

**೫.೨ ಆಕೃತಿಮಾ ಹಂತ**

ಗುಲಬರ್ಗಾ ಕನ್ನಡಕ್ಕೆ ಸ್ವೀಕರಣಗೊಂಡಿರುವ ಕ್ರಿಯಾಪದಗಳ ಆಕೃತಿಮಾತ್ಮಕ ರಚನೆ ನೋಡಿದರೆ ಅವುಗಳ ರಚನೆ ಕೆಲವು ಹಂತದಲ್ಲಿ ಕನ್ನಡ ಕ್ರಿಯಾಪದಗಳ ರಚನೆಗಿಂತ ಭಿನ್ನವಾಗಿ ನಿಲ್ಲುತ್ತವೆ. ಗುಲಬರ್ಗಾ ಕನ್ನಡವು ಸ್ವೀಕರಿಸಿಕೊಂಡಿರುವ ಕ್ರಿಯಾಪದಗಳನ್ನು ನಾಮಪದ, ಗುಣವಾಚಕಗಳಂತೆ ಬಳಸಿಕೊಂಡು ಕ್ರಿಯಾಪದ ನಿರ್ಮಿಸಿಕೊಂಡಿದೆ. ಅವುಗಳು ರೂಢ, ಅನ್ವರ್ಥ ನಾಮಗಳು ಕೆಲವೊಮ್ಮೆ ಗುಣವಾಚಕಗಳಂತೆ ಕನ್ನಡ ಕ್ರಿಯಾಧಾತುಗಳೊಂದಿಗೆ ಬಂದು ವಾಕ್ಯ ನಿರ್ಮಾಣಗೊಳ್ಳುತ್ತಿವೆ. ಇವುಗಳು ಕನ್ನಡ ಕ್ರಿಯಾ ಪ್ರತ್ಯಯಗಳನ್ನು ಸ್ವೀಕರಿಸುವುದಿಲ್ಲವೆನ್ನಬಹುದೆನೋ, ಕೇದಿಲಾಯ (೧೯೭೦) ಅವರು ಇದರ ಬಗ್ಗೆ ಹೀಗೆ ಹೇಳುತ್ತಾರೆ Lone words are Do not take The Kunnada Verbal suffixes and do not conjugete like Kannada verbs The; loned word's are used with Kannada auxiliary verbs like maduand aguv..." ಪರ್ಶೋ-ಅರೇಬಿಕ್ ಪದಗಳು ಕ್ರಿಯಾಪದಗಳಾಗಿ ಬದಲಾಗುವಾಗ ತೆಗೆದುಕೊಳ್ಳುವ ಕನ್ನಡ ಕ್ರಿಯಾಧಾತುಗಳ ಬಗ್ಗೆ ವಿವರಿಸುತ್ತಾರೆ. ಅಂಥಂತದ್ದೆ ಸ್ಥಿತಿ ಉರ್ದು, ಮರಾಠಿಯಿಂದ ಬಂದ ಪದಗಳಲ್ಲು ನಡೆದಿದೆ. ಇವುಗಳೊಂದಿಗೆ ಸ್ವೀಕರಣ ಪದಗಳು ಕನ್ನಡದ ಕ್ರಿಯಾ ಪ್ರತ್ಯಯವಾದ - ಇಸು ವನ್ನು ಕ್ರಿಯಾಪದ ರಚನೆಗೆ ಬಳಸಿಕೊಂಡಿವೆ. ಸ್ವೀಕರಣ ಪದಗಳು ಕ್ರಿಯಾಪದವಾಗುವಾಗ ಮಾಡಿಕೊಂಡಿರುವ ರಚನೆಗಳನ್ನು ಈ ಕೆಳಗಿನಂತೆ ಕಾಣಬಹುದು.

**೫.೨.೧ –ಇಸು**

ಈ ಪ್ರತ್ಯಯವನ್ನು ನಾಮಪದ, ವಿಶೇಷಣ ಕ್ರಿಯಾಪದಗಳಿಗೆ ಸೆರಿಸುವುದರ ಮೂಲಕ ಬೇರೆ ಹೊಸ ಕ್ರಿಯಾಪದಗಳನ್ನು ರಚಿಸುವ ಪ್ರಕ್ರಿಯೆ ಕನ್ನಡದಲ್ಲಿದೆ. ಚಾರಿತ್ರಿಕವಾಗಿ ಇದಕ್ಕೆ ಇಸು ಎನ್ನುವ ಕ್ರಿಯಾರೂಪವೇ ಮೂಲ ಕಾರಣವಾಗಿರಬೇಕೆಂದು ಭಟ್ಟರು (ಕನ್ನಡ ನುಡಿ ನಡೆದುಬಂದ ದಾರಿ, ೧೯೯೯, ೩೯) ಅಭಿಪ್ರಾಯಪಡುತ್ತಾರೆ. ಇದು ಅನ್ಯ ಭಾಷೆಗಳಿಂದ (ಸಂಸ್ಕೃತ, ಪರ್ಶೋ ಅರೇಬಿಕ್, ಉರ್ದು, ಮರಾಠಿ, ಇಂಗ್ಲಿಷ್)ಬಂದ ಪದಗಳಿಗೆ ಸೇರಿಸುವುದರ ಮೂಲಕ ಕ್ರಿಯಾರ್ಥ ಸಾಧಿಸಲು ಬಳಕೆಕೊಂಡು ಆನಂತರ ಕ್ರಮೇಣ ಕನ್ನಡ ಕ್ರಿಯಾಪದಗಳಿಗೂ ವಿಸ್ತರಿಸಿಕೊಂಡಿದೆ. ಕನ್ನಡದಲ್ಲಿ ಅನೇಕ ಸಾಧಿತ ಕ್ರಿಯಾಪದಗಳಿವೆ. ಅವುಗಳೆಲ್ಲ ಯಾವುದಾದರೊಂದು ಕ್ರಿಯಾಧಾತುವಿನ

ಸಹಾಯದಿಂದ ನಿರ್ಮಾಣವಾದವುಗಳು. ಮಾಡು, ಕೊಡು, ಆಗು, ಹಾಕು, ಕೊಳ್ಳು, ಕೆಲವು ಕ್ರಿಯಾಧಾತುಗಳು ಹೊಸ ಪದ ರಚನೆಗೆ ತೆರೆದುಕೊಳ್ಳುತಿರುವುದು ನೋಡಿದರೆ ಬಹುಶಃ 'ಇಸು' ಈ ಹಂತ ದಾಟಿಯೇ ಬಂದಿರಬೇಕೆನಿಸದೆ ಇರದು. ಹೀಗಾಗಿ –ಇಸು ವಿಗೆ ಮೂಲ ಕ್ರಿಯಾಪದವಾಗಿರುವುದರಿಂದ ಇದನ್ನು ಪ್ರತ್ಯಯವೆನ್ನದೆ ಕ್ರಿಯಾಪದವೆನ್ನುವುದೆ ಉಚಿತವೆಂದು ತೋರುವದೆಂದು ಭಟ್ಟರು (ಅದೇ, ೧೯೯೯, ೩೯) ಅಭಿಪ್ರಾಯಪಡುತ್ತಾರೆ. ಇದು ಅದರ ಬಳಕೆಯ ಚಾರಿತ್ರಿಕ ಅಧ್ಯಯನದಿಂದ ಗಟ್ಟಿಗೊಳ್ಳಬಲ್ಲದು. ಅದಕ್ಕೆ ಅವಶೇಷಗಳ ಅಗತ್ಯತೆ ಇದೆ.

ಕನ್ನಡದಲ್ಲಿ ಇನ್ನೊಂದು '-ಇಸು' ಪ್ರತ್ಯಯವಿದೆ. ಅದು ಪದಗಳಿಗೆ ಪೇರಣಾರ್ಥಕವಾಗಿ ಬರುತ್ತದೆ. ಇದು ಕ್ರಿಯಾಪದಗಳಿಗೆ ಸೇರುವುದರ ಮೂಲಕ ಆ ಕೆಲಸದ ಪ್ರೇರಣೆಗೆ ಕಾರಣವಾದ ಶಕ್ತಿಯನ್ನು ತಿಳಿಸುತ್ತದೆ.

ಮಾಡು > ಮಾಡಿಸು

ಕುಡಿ > ಕುಡಿಸು

ತಿನ್ನು > ತಿನ್ನಿಸು

ನಿಲ್ಲು > ನಿಲ್ಲಿಸು

ಕಚ್ಚು > ಕಚ್ಚಿಸು ಇತ್ಯಾದಿ

ಈ ಎರಡೂ, (ಇಸು) ರೂಪಗಳಲ್ಲಿ ಒಂದೇ ಆಗಿದ್ದರೂ ಮೊದಲನೆಯದ್ದು ಮಾತ್ರ ಸ್ವೀಕರಣ ಪದಗಳಿಂದ ಕ್ರಿಯಾಪದ ರಚನೆಗೆ ಸಂಬಂಧಿಸಿದ್ದಾಗಿದೆ. ಗುಲಬರ್ಗಾ ಕನ್ನಡದಲ್ಲಿ ಮರಾಠಿ, ಉರ್ದುವಿನ ನಾಮಪದ, ಕ್ರಿಯಾಪದಗಳಿಗೆ '-ಇಸು' ಪ್ರತ್ಯಯ ಸೇರುವುದರ ಮೂಲಕ ಕನ್ನಡದಲ್ಲಿಯೂ ಕ್ರಿಯಾಪದಗಳಾಗಿ ಬಳಕೆಗೊಳ್ಳುತ್ತವೆ. ಅವುಗಳನ್ನು ಹೀಗೆ ಗುರುತಿಸಬಹುದು.

### ೫.೨.೧.೧ ಮರಾಠಿ

| ಸ್ವೀಕೃತ ರೂಪ + ಪ್ರತ್ಯಯ | ಗುಲಬರ್ಗಾ ಕನ್ನಡ | ಬರವಣಿಗೆ ರೂಪ |
|---|---|---|
| ಅಟಕ + ಇಸು | ಅಟಕಾಸು | < ಅಟಕಾಯಿಸು |
| ಅಕಡ + ಇಸು | ಅಕಡಾಸು | < ಅಕಡಾಯಿಸು |
| ಚಡ + ಇಸು | ಚಡಾಸು | < ಚಡಾಯಿಸು |
| ಚುಡ + ಇಸು | ಚುಡಾಸು | < ಚಾಡಾಯಿಸು |
| ಖವಳ + ಇಸು | ಖವಳುಸು | < ಖವಳಿಸು |
| ಛಾಪ + ಇಸು | ಛಪಾಸು | < ಛಾಪಾಯಿಸು |

| | | |
|---|---|---|
| ಜಟಕಾ + ಇಸು | ಜಟಕಾಸು | < ಜಟಕಾಯಿಸು |
| ಝುಡಕ + ಇಸು | ಝುಡಕಾಸು | < ಝುಡಯಕಾಸು |
| ಜಾಣಾ + ಇಸು | ಜಾಣಾಸು | < ಜಾಣಾಸು |
| ಟಿಕ + ಇಸು | ಟಿಕಾಸು | < ಟಿಕಾಯಿಸು |
| ಠರಾ + ಇಸು | ಠರಾಸು | < ಠರಾಯಿಸು |
| ತಕ + ಇಸು | ಥಕಾಸು | < ಥಕಾಯಿಸು |
| ಪಟ + ಇಸು | ಪಟಾಸು | < ಪಟಾಯಿಸು |
| ಲುಟ + ಇಸು | ಲುಟಾಸು | < ಲುಟಾಯಿಸು |
| ಲಟ + ಇಸು | ಲಟಾಸು | < ಲಟಾಯಿಸು |
| ವಪರ + ಇಸು | ವಪರಾಸು | < ವಪರಾಯಿಸು |
| ಸಂಭಾಲ + ಇಸು | ಸಂಬಾಳ್ಸಾ | < ಸಂಬಾಳಿಸು |

೫.೨.೧.೨. ಉರ್ದು

| | | |
|---|---|---|
| ಉಡ + ಇಸು | ಉಡಾಸು | < ಉಡಾಯಿಸು |
| ಕಮಾಯ + ಇಸು | ಕಮಾಸು | < ಕಮಾಯಿಸು |
| ಖೊಲ + ಇಸು | ಖುಲಾಸು | < ಖುಲಾಯಿಸು |
| ಚಮಕ + ಇಸು | ಚಮಕಾಸು | < ಚಮಕಾಯಿಸು |
| ಚಿಟಕ + ಇಸು | ಚಿಟಕಾಸು | < ಚಿಟಕಾಯಿಸು |
| ಜಮಾ + ಇಸು | ಜಮಾಸು | < ಜಮಾಯಿಸು |
| ಝುಕ + ಇಸು | ಜುಕಾಸು | < ಝುಕಾಯಿಸು |
| ದಬ + ಇಸು | ದಭಾಸು | < ದಬಾಯಿಸು |
| ನಿಭ + ಇಸು | ನಿಭಾಸು | < ನಿಭಾಯಿಸು |
| ಪೌಂಚ + ಇಸು | ಪೌಂಚಾಸು | < ಪೌಂಚಾಯಿಸು |
| ಫಸ + ಇಸು | ಫಸಾಸು | < ಫಸಾಸು |
| ಬಡ + ಇಸು | ಬಡಾಸು | < ಬಡಾಯಿಸು |

| | | |
|---|---|---|
| ಬಡಕ + ಇಸು | ಬಡಕಾಸು | < ಬಡಕಾಯಿಸು |
| ಲಗ + ಇಸು | ಲಗಾಸು | < ಲಗಾಯಿಸು |
| ಪುಸಲ + ಇಸು | ಪುಸಲಾಸು | < ಪುಸಲಾಯಿಸು |
| ರೊಖ + ಇಸು | ರೊಕಾಸು | < ರೋಖಾಯಿಸು |

ಈ ಮೇಲಿನ ರಚನೆಗಳಲ್ಲಿ '–ಇಸು'ವಿನ ಬಳಕೆ ಕ್ರಿಯಾಪದ ರಚನೆಗೆ ಸಂಬಂಧಿಸಿದ್ದಲ್ಲದೆ. ಪ್ರೇರಣಾರ್ಥಕವಾಗಿ ಬಂದಿದ್ದಲ್ಲ. ಪ್ರೇರಣಾರ್ಥಕವಾಗಿ ಬರುವ 'ಇಸು' ಕನ್ನದ '-ಅಲ್ಪಡು' ಪ್ರತ್ಯಯದ ಪೂರಕವಾಗಿ ಬರುವಂಥದ್ದು. ಇಲ್ಲಿ '-ಇಸು' ಧಾತುವಿಗೆ ಸೇರುವುದರ ಮೂಲಕ ಪೂರ್ಣ ಕ್ರಿಯಾಪದ ಆಗುವ ಪ್ರಕ್ರಿಯೆಗೆ ಕನ್ನಡದಲ್ಲಿ '-ಉ', '-ಎ', '-ಇ' ಕ್ರಿಯಾ ಪ್ರತ್ಯಯಗಳು ಕ್ರಿಯಾಧಾತುಗಳಿಗೆ ಸೇರುವ ಮೂಲಕ ಪೂರ್ಣ ಕ್ರಿಯಾಪದ ನಿರ್ಮಾಣವಾಗಿರುವುದು ಕಂಡುಬರುತ್ತದೆ. ಇದರಂತೆಯೇ ಸ್ವೀಕರಣ ಪದಗಳಿಗೆ ಸೇರುವ '-ಇಸು' ಪ್ರತ್ಯಯವು ಕನ್ನಡದ ಕ್ರಿಯಾ ಪ್ರತ್ಯಯಗಳ ಪೂರಕ ಪರಿಸರದಲ್ಲಿ ಬರುತ್ತಿದೆ.

ಕನ್ನಡದಲ್ಲಿ -ಇಸು (ಪ್ರೇರಣಾರ್ಥಕ) ಪ್ರತ್ಯಯದ ಕೆಲಸವನ್ನು ಈ ಪದಗಳ ಮೂಲದಲ್ಲಿ '-ಆ' ನಿರ್ವಹಿಸುತ್ತಿರುವುದು ಕಾಣಬಹುದು.

| | |
|---|---|
| ಜಪ + ಆ | ಜಪ್ಪಿಸಿ |
| ಚಿಟಕ + ಆ | ಚಿಟಕಾ |
| ಪೌಂಚ + ಆ | ಪೌಂಚಾ |
| ಲುಟ + ಆ | ಲುಟಾ |
| ಪುಸಲ + ಆ | ಪುಸಲಾ |

ಕೆಲವು ಪದಗಳಲ್ಲಿ ಪದಾಂತ್ಯ ದಿತ್ವವಿದ್ದಾಗ ಕೊನೆಯ 'ಅ' ಕಾರ ಬಿದ್ದು ಹೋಗಿ 'ಇ' ಕಾರವಾಗುತ್ತದೆ.

| | |
|---|---|
| ಚಪ್ಪ + ಇಸು | ಚಪ್ಪಿಸು |
| ಝುಕ್ಕ + ಇಸು | ಝುಕ್ಕಿಸಿ |

'-ಇಸು' ಪ್ರತ್ಯಯಯುಕ್ತ ಪದಗಳೆಲ್ಲ ಕನ್ನಡದ ಅಥವಾ ಸಂಸ್ಕೃತದ ಸ್ವರಸಂಧಿಗಳ ನಿಯಮದಂತೆ ಬದಲಾಗದೆ ಬೇರೆ ತರಹದ ರಚನೆಗಳನ್ನು ಪಡೆದುಕೊಳ್ಳುತ್ತಿವೆ. ಈ ಪ್ರಕ್ರಿಯೆಯ ಬಗ್ಗೆ ಇನ್ನು ಹೆಚ್ಚಿನ ಅಧ್ಯಯನ ಬಯಸುತ್ತದೆ.

### ೫.೨.೨. ಮಾಡು ಮತ್ತು ಆಗು

ಇವುಗಳನ್ನು ಗುಣ, ನಾಮಪದಗಳೊಂದಿಗೆ ಸೇರಿಸಿ ಕ್ರಿಯಾಪದ ಸಾಧಿಸಲು ಸಾಧ್ಯವಿದೆ. ಆಗು ಬಳಸಿ ಸಂಧಿಪದ ರಚಿಸಿದರೆ ಮಾಡು ಸೇರಿಸಿ ಸಮಾಸ ಪದ ರಚಿಸಲಾಗುತ್ತದೆ. ಕನ್ನಡದಲ್ಲಿ ಅನ್ಯ ಭಾಷೆಯಿಂದ ಬಂದ ಪದಗಳಿಗೆ ಆಗು ಮತ್ತು ಮಾಡು ಈ ಕ್ರಿಯಾಧಾತುಗಳನ್ನು ಸೇರಿಸಿದರೆ ಒಂದು ಘಟನೆಯನ್ನು (ಆಗು) ಮತ್ತು ಇನ್ನೊಂದು (ಮಾಡು) ಕೆಲಸವನ್ನು ತಿಳಿಸುವುದನ್ನು ಕಾಣುತ್ತೇವೆ.

| **ಮಾಡು** | **ಆಗು** |
|---|---|
| ಅಟಕಾವಮಾಡು | ಅಟಕಾವ ಆಗು |
| ಬದಲಿಮಾಡು | ಬದಲಿಆಗು |
| ಅಡಚಣಮಾಡು | ಅಡಚಣಾಗು |
| ಅವಡಾಸವಡಾಮಾಡು | ಅವಡಾಸವಡಾ ಆಗು |
| ಅವಾಜಮಾಡು | ಆವಾಜ ಆಗು |
| ಆರಾಮಮಾಡು | ಆರಾಮಾಗು |
| ಉಲ್ಟಾಮಾಡು | ಉಲ್ಟಾಆಗು |
| ಗಡುಪಮಾಡು | ಗಡುಪಾಗು |
| ಕವಕವಮಾಡು | ಕವಕವಾಗು |
| ಚಾಲುಮಾಡು | ಚಾಲುಆಗು |
| ಧೋಕಾಮಾಡು | ದೋಕಾಆಗು |
| ಭರ್ತಿಮಾಡು | ಭರ್ತಿಆಗು |
| ಉಲ್ಪಿಮಾಡು | ಉಲ್ಪಿಆಗು |
| ಫಚ್ಚಮಾಡು | ಫಚ್ಚಾಗು |
| ಪಾರಮಾಡು | ಪಾರಾಗು |
| ಬಿದಾಯಿಮಾಡು | ಬಿದಾಯಿ ಆಗು |
| ಲೂಟಿಮಾಡು | ಲೂಟಿ ಆಗು |
| ವಟಾಳಿಮಾಡು | ವಟಾಳಿ ಆಗು |

ಇಂತಹ ಅನೇಕ ಪದಪುಂಜಗಳನ್ನು ವಿವರಿಸಬಹುದು. ಇವುಗಳಲ್ಲದೆ ಕೆಲಸವನ್ನು ತಿಳಿಸುವ ಮಾಡು ಕ್ರಿಯಾಧಾತು ಪದ ತೆಗೆದುಕೊಂಡು ಘಟನೆಯೊಂದನ್ನು ವಿವರಿಸುವ ಕೆಲವು ಪದಗಳು ಆಗು ತೆಗೆದುಕೊಳ್ಳುವುದಿಲ್ಲ.

| | |
|---|---|
| ಅಗಾವಮಾಡು | ಚುಕ್ತಾಮಾಡು |
| ತಪಾಸಮಾಡು | ತಾಕಿತಮಾಡು |
| ದೇಖರೇಖಮಾಡು | ನಿಗರಾಣಿಮಾಡು |
| ಪಂಚಾತಿಮಾಡು | ಬಚಾವಮಾಡು |
| ಬೈತಾಕಿಮಾಡು | ದಂಗಿಮಾಡು |

ಈ ಪದಗಳು 'ಆಗು' ಧಾತುವನ್ನು ತೆಗೆದುಕೊಳ್ಳಲಾರದು. ಈ ಎರಡು ಕ್ರಿಯಾ ಧಾತುಗಳು ಕನ್ನಡದಲ್ಲಿ ನಾಮಪದ ಗುಣವಾಚಕಗಳೊಂದಿಗೆ ಬಂದು ಹೊಸಪದ ರಚನೆ ಮಾಡುವವು. ಆದರೆ ಸ್ವೀಕರಣ ಪದಗಳಲ್ಲಿ ಕ್ರಿಯಾಪದಗಳನ್ನು ಸೇರುವುದರ ಮೂಲಕ ಪದರಚನೆ ಆಗಿರುವುದ ಕಾಣಬಹುದಾಗಿದೆ.

**೫.೨.೩ ಹಾಕು**

| | |
|---|---|
| ಅವಾಜಹಾಕು | ಕರಾರಹಾಕು |
| ಗೊಂದಲುಹಾಕು | ಫೇರಹಾಕು |
| ಧಮಕಿಹಾಕು | ಹುಡದಿಹಾಕು |
| ಟಾಕಿಹಾಕು | ಪಲ್ಲಿಹಾಕು |

ಕನ್ನಡದಲ್ಲಿ ಈ ಧಾತುವಿಗೆ ಕೆಲಸವನ್ನು ಮಾಡಿ ಮುಗಿಸು ಎನ್ನುವ ಅರ್ಥದಲ್ಲಿ ಬಳಸಲಾಗುತ್ತದೆ. ಇದು ಈ ಮೇಲಿನ ಪದಗಳಲ್ಲಿ ಮಾಡು, ಹೆರು, ಆಗು, ಆಡು ಈ ಅರ್ಥಗಳಲ್ಲಿ ಬಳಕೆಯಾಗುತ್ತಿದೆ.

**೫.೨.೪ ಇಡು**

| | |
|---|---|
| ಖುಸಿಇಡು | ಠೇವಣಿಇಡು |
| ನೀಗಾಇಡು | ಪಂಚಾತಿಇಡು |

ಇದು ಕನ್ನಡದಲ್ಲಿ ನಾಮಪದ, ಗುಣವಾಚಕ ಮತ್ತು ಕ್ರಿಯಾ ಧಾತುಗಳಿಗೆ ಜೋಡಿಸುವ ರೂಪಗಳೊಂದಿಗೆ ಬಳಕೆಯಾಗುತ್ತದೆ. ಹೆಚ್ಚಿನ ಸಂದರ್ಭಗಳಲ್ಲಿ ಸಮಾಸಗೊಂಡ ಪದದ ಮೂಲಧಾತುವಿನ ಕೆಲಸವನ್ನು ತಿಳಿಸುತ್ತದೆ.

೫.೨.೫ ಇರು

| | |
|---|---|
| ಅಗಾವದಾ | ಅಡಚಣದಾ |
| ಉಲ್ಟಾದಾ | ಆರಾಮದಾ |
| ಚಾಲುದಾ | ನಿಗಾದಾ |
| ಬರಾಬರದ | |

ಈ ಪದಗಳಲ್ಲಿ ಇರು ಕ್ರಿಯಾಧಾತು ಅದಾ ರೂಪದಲ್ಲಿ ಬಳಕೆಯಲ್ಲಿದೆ. ಇದೆ>ಅದೆ>ಅದಾ ಆಗಿ ಪರಿವರ್ತನೆ ಹೊಂದಿ ಗುಲಬರ್ಗಾ ಕನ್ನಡದಲ್ಲಿ ಬಕೆಯಲ್ಲಿದೆ. ಇದೇ ಸ್ವೀಕರಣ ಪದಗಳಿಗೆ ಸೇರುವುದರ ಮೂಲಕ ಹೊಸ ಪದ ರಚನೆಯಾಗುತ್ತವೆ.

**೫.೨.೬. ಕೊಡು**

ಇದನ್ನು ಒಂದು ಕೆಲಸವನ್ನು ಇನ್ನೊಬ್ಬರ ನೆರವಿಗಾಗಿ ಮಾಡಲಾಗಿದೆ ಎಂಬಂತೆ ಬಳಸಲಾಗುತ್ತದೆ.

ಅಗಾವಕೊಡು

ಬಟಾಯಿಕೊಡು

ಸೂಟಿಕೊಡು

**೫.೨.೭. ಬಿಳು**

ಏನೋ ಕೆಟ್ಟದಾಗಿರುವ ಘಟನೆ ನಡೆದಿದೆ ಅನ್ನುವ ಅರ್ಥದಲ್ಲಿ ಇದನ್ನು ಬಳಸಲಾಗುತ್ತದೆ.

ಪಲ್ಟಿಬಿಳು

ಉಲ್ಟಾಬಿಳು

ಫರಾಕಬಿಳು

ಕನ್ನಡದಲ್ಲಿ ನಾಮಪದ, ಗುಣವಾಚಕ ಪದಗಳಿಗೆ ಸಮಾಸ ಪದವನ್ನಾಗಿಸುವ ಸಲುವಾಗಿ ಬಳಕೆಗೊಳ್ಳುವ ಪ್ರತ್ಯಯ, ಕ್ರಿಯಾಧಾತು ಪದಗಳನ್ನು ಕನ್ನಡ ಪರಿಸರ ರೂಪಿಸಿಕೊಂಡಿದೆ. ಇದಕ್ಕೆ ಈ ಹೊಸ ರಚನೆಯ ಹಿಂದಿನ ಉದ್ದೇಶ ಹೊಸ ಅರ್ಥ ಹೊರಹೊಮ್ಮಿಸುವುದಾಗಿರಬಹುದು. ಇಲ್ಲಾ ಹೊಸ ಕೆಲಸ ಗುರುತಿಸುವದು. ಈ ಪ್ರಕ್ರಿಯೆ ಕನ್ನಡಕ್ಕೆ ಸ್ವೀಕರಣಗೊಂಡು ಬಂದಿರುವ ಪದಗಳಿಗೂ ಮುಂದೆವರೆದಿದ್ದನ್ನು ನೋಡಿದ್ದಿರಿ. ಅವುಗಳು ಕನ್ನಡದ ಪದಗಳಿಗೆ ನೀಡುತ್ತಿದ್ದ ಅರ್ಥವೇ ಸ್ವೀಕರಣ ಪದಗಳೊಂದಿಗೆ ಸೇರಿ ನೀಡುತ್ತಿವೆ ಎನ್ನುವುದು ಕಷ್ಟವೇ. ಎರಡು ಸ್ವಭಾಷಿಕ ರೂಪಗಳು ನೀಡುವ ಅರ್ಥಕ್ಕೂ ಸ್ವಭಾಷೆ, ಪರಭಾಷೆ ಪದಗಳು ಕೂಡಿ ನೀಡುವ ಅರ್ಥಕ್ಕೂ

ನಡುವೆ ಅನೇಕ ವ್ಯತ್ಯಾಸಗಳಾಗುವ ಸಾಧ್ಯತೆ ಇರುತ್ತದೆ. ಯಾಕೆಂದರೆ ಕನ್ನಡದಲ್ಲಿ ಕ್ರಿಯಾಪದ ರಚನೆಗೆ ಕೆಲವು ಪ್ರತ್ಯಯ ಮತ್ತು ಕ್ರಿಯಾಧಾತುಗಳು ನಾಮ ಮತ್ತು ಗುಣ ಪದಗಳೊಂದಿಗೆ ಬಳಕೆಗೊಳ್ಳುತ್ತವೆ. ಆದರೆ ಮರಾಠಿ ಮತ್ತು ಉರ್ದುವಿನಿಂದ ಸ್ವೀಕರಣಗೊಂಡ ಪದಗಳು ಮೂಲದಲ್ಲಿ ಕ್ರಿಯಾಪದಗಳೇ ಆಗಿದ್ದು, ಕನ್ನಡ ಪರಿಸರಕ್ಕೆ ಬಂದಿರುವುದು ನಾಮವಾಚಕಗಳಾಗಿ. ಹೀಗಾಗಿ ಅವುಗಳ ಬಳಕೆಯಲ್ಲಿ ಅನೇಕ ವೈರುಧ್ಯಗಳಾಗಬಹುದು. ಇದಕ್ಕೆ ಕನ್ನಡದ ಕ್ರಿಯಾಧಾತುಗಳು ಸೇರಿದಾಗ ಅವುಗಳು ಕ್ರಿಯಾಪದಗಳಾಗಿ ಬದಲಾಗಿದ್ದರೂ ಮೂಲ ಭಾಷೆಯ ಬಳಕೆಯ ಅರ್ಥಕ್ಕಿಂತ ಬೇರೆಯದ್ದಾಗಿರುತ್ತದೆ ಮತ್ತು ಕನ್ನಡ ಮೂಲ ಪದಗಳ ಅರ್ಥಕ್ಕಿಂತ ಭಿನ್ನವಾಗಿರುತ್ತದೆ.

**೫.೨.೮. ಸಂಧಿಗೊಂಡಿರುವ ಪದಗಳು**

**೫.೨.೮.೧ ಮರಾಠಿ**

ಅಕಡ + ಇಸು - ಅಕಡಾಸು (ಅ - ಇ = ಆ)

ಖವಳ + ಇಸು - ಖವಳುಸು (ಅ - ಇ = ಉ)

ಡೊಂಗ + ಇದೆ - ಡಂಗಿದಾ (ಅ - ಇ = ಇ)

ನಿಗಾಹ + ಇದೆ - ನಿಗಾದಾ (ಅ - ಇ = ಆ)

ಅಡಚಣ +. ಇದೆ- ಅಡಚಣದಾ (ಅ - ಇ = ಅ)

ಫೇರ + ಹಾಕು - ಫೇರಾಕು (ಅ - ಆ (ಹ > ø ) = ಆ)

**೫.೨.೮.೨. ಉರ್ದು**

ಚಾಲು + ಇದೆ - ಚಾಲುದಾ (ಉ - ಇ = ಉ)

ಬರಾಬರ + ಇದೆ - ಬರಾಬರದಾ (ಅ - ಇ = ಅ)

ಉಲ್ಟಾ + ಇದೆ - ಉಲ್ಟಾದಾ (ಆ - ಇ = ಆ)

ಆರಾಮ + ಆಗು- ಆರಾಮಾಗು (ಅ - ಆ = ಆ)

-ಇಸು ಪ್ರತ್ಯಯ ಸೇರುವ ಪದಗಳೆಲ್ಲ ಸಂಧಿಗೊಳ್ಳುವಾಗ

ಅಕಡ + - ಇಸು - ಅಕಡಾಸು (ಅ - ಇ = ಆ)

ಖವಳ + - ಇಸು - ಖವಳುಸು (ಅ - ಇ = ಉ)

ಈ ಎರಡು ನಿಯಮಗಳಲ್ಲಿ ರಚನೆಗೊಂಡಿವೆ. ಅವುಗಳಲ್ಲಿ ಅ - ಇ ಸೇರಿ ಆ ಕಾರಗಮನವಾದ ರೂಪಗಳೇ ಹೆಚ್ಚಿನವುಗಳಾಗಿವೆ.

ಅನ್ಯ ಭಾಷೆಗಳ ಪದಗಳನ್ನು ಸ್ವೀಕರಿಸಿಕೊಂಡು ಬಳಕೆ ಮಾಡಿಕೊಳ್ಳೊದು ಭಾಷೆಯ ಸಾಮಾನ್ಯ ಲಕ್ಷಣಗಳಲ್ಲಿ ಒಂದು. ಹಾಗೆಯೇ ಕನ್ನಡವು ಸ್ವೀಕರಿಸಿಕೊಂಡಿದ್ದು ಅನೇಕ ಪದಗಳಲ್ಲಿ ಕ್ರಿಯಾ ಪದಗಳೂ ಇವೆ. ಅವುಗಳು ಇಂದು ಈ ಹೊತ್ತಿಗೆ ತಮ್ಮ ಮೂಲ ರಚನೆಯನ್ನು ಕಳೆದುಕೊಂಡು ಕನ್ನಡದ ರಚನೆಯನ್ನು ತಮ್ಮದಾಗಿಸಿಕೊಂಡಿವೆ. ಅವುಗಳ ಬಳಕೆಗೊಳ್ಳುತ್ತಿರುವ ಮತ್ತು ಅವುಗಳು ಮಾಡಿಕೊಂಡಿರುವ ಆಂತರಿಕ ರಚನಾ ವ್ಯತ್ಯಾಸಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಅಧ್ಯಾಯ ಐದು

# ಗುಲಬರ್ಗಾ ಕನ್ನಡ ನುಡಿ: ಸ್ವೀಕೃತ ಗುಣವಾಚಕಗಳ ರಚನೆ

ಒಂದು ಭಾಷೆಯ ಪದಕೋಶದಲ್ಲಿರುವ ಎಲ್ಲಾ ಪದಗಳ ಕೆಲಸ ಒಂದೇ ಆಗಿರುವುದಿಲ್ಲ. ಅವುಗಳಲ್ಲಿ ಎಲ್ಲವು ಎಲ್ಲಿ ಬೇಕೆಂದರಲ್ಲಿ ಸ್ವತಂತ್ರವಾಗಿ ಬಳಕೆಗೊಳ್ಳಲಾರವು. ಎಲ್ಲಾ ಪದಗಳಿಗೂ ಅವುಗಳದ್ದೇ ಆದ ಮಿತಿಗಳಿರುತ್ತವೆ. ಈ ಮಿತಿಗಳು ಆ ಪದ ಒಂದು ವಾಕ್ಯವಾಗಿ ನಿರ್ವಹಿಸಬೇಕಾಗಿರುವ ಕೆಲಸದ ಮೇಲೆ ರೂಪಗೊಂಡಿರುತ್ತವೆ. ಅದನ್ನ ಆ ಭಾಷಿಕ ಸಮುದಾಯವೇ ರೂಪಿಸಿಕೊಂಡಿರುತ್ತವೆ.

ಒಂದು ಭಾಷೆಯ ಪದಕೋಶವನ್ನು ವರ್ಗೀಕರಣ ಮಾಡುವಾಗ ಭಾಷೆಯಿಂದ ಭಾಷೆಗೆ ಭಿನ್ನತೆ ಕಂಡುಬರುತ್ತದೆ. ಕೆಲವು ಭಾಷಾ ಕುಟುಂಬಗಳು ನಾಮಪದ, ಕ್ರಿಯಾಪದಗಳೆಂದು ಎರಡು ಮುಖ್ಯವರ್ಗಗಳನ್ನಾಗಿ ವಿಂಗಡಿಸಿಕೊಂಡು ಉಳಿದ ಪ್ರಕಾರದ ಪದಗಳನ್ನು ಅವುಗಳಲ್ಲೆ ವಿವರಿಸಿಕೊಂಡಿವೆ. ಇನ್ನು ಕೆಲವು ಭಾಷೆಗಳು ಎರಡಕ್ಕಿಂತ ಹೆಚ್ಚು. ದ್ರಾವಿಡ ಭಾಷಾ ಪರಿವಾರವು ನಾಮಪದ, ಕ್ರಿಯಾಪದದೊಂದಿಗೆ ಗುಣವಾಚಕ ಎನ್ನುವ ಇನ್ನೊಂದು ವರ್ಗವನ್ನು ಮಾಡಿಕೊಂಡಿದೆ.

ವ್ಯಕ್ತಿಯ, ವಸ್ತುವಿನ, ಪ್ರಾಣಿಯ ಅಥವಾ ಒಂದು ವಿಷಯದ ಗುಣವನ್ನೋ, ರೀತಿಯನ್ನೋ (ಪ್ರಕಾರ), ಅಳತೆಯನ್ನೋ (ಪ್ರಮಾಣ) ವಿಶ್ಲೇಷಿಸಿ ಅಂದರೆ ವಿಶೇಷವಾಗಿ ಗುರುತಿಸಿ ಗುಣಿಸುವ ಶಬ್ದಗಳೇ ಗುಣವಾಚಕಗಳು.

ಕ್ರಿಯಾಪದಗಳಿಗೆ ಮಾಡುವ ಕೆಲಸವನ್ನು ಇಲ್ಲವೇ ನಡೆಯುವ ಘಟನೆಯನ್ನು ವಿವರಿಸುವ ಕೆಲಸವಾದರೆ, ನಾಮಪದಗಳಿಗೆ ಆ ಕ್ರಿಯೆಯಲ್ಲಿ ತೊಡಗಿಕೊಂಡಿರುವ ವ್ಯಕ್ತಿ ವಸ್ತು, ವಿಷಯ ಮೊದಲಾದವುಗಳನ್ನು ಗುರುತಿಸುವ ಕೆಲಸವಿದೆ. ಗುಣವಾಚಕ ಪದಕ್ಕೆ ನಾಮಪದದ ಮತ್ತು

ಕ್ರಿಯಾಪದದ ಕೆಲಸವನ್ನು ಅಥವಾ ಅದರ ಚಲನೆಯನ್ನು ಮಿತಿಗೊಳಿಸುವುದರೊಂದಿಗೆ ಒಂದು ವಿಷಯವನ್ನು ನಿರ್ದಿಷ್ಟಪಡಿಸುವ ಮತ್ತು ಅದರ ಗುಂಪು, ಆಕಾರ, ಸ್ಥಿತಿಗಳನ್ನು ಗುರುತಿಸಿ ವಿವರಿಸುವ ಜವಾಬ್ದಾರಿಯಿದೆ.

ಒಂದು ಭಾಷೆಯು ಪದಗಳನ್ನು ಸ್ವೀಕರಿಸಿಕೊಳ್ಳುವಾಗ ನಾಮಪದಗಳನ್ನೇ ಹೆಚ್ಚಾಗಿ ಸ್ವೀಕರಿಸುತ್ತದೆ. ವಿಶೇಷಣಗಳು (ಗುಣವಾಚಕ) ಕ್ರಿಯಾಪದದಂತೆ ಅಲ್ಪ ಪ್ರಮಾಣದಲ್ಲಿ ಸ್ವೀಕರಣ ಕ್ರಿಯೆಗೊಳಗಾಗುವವು. ಎನ್ನಬಹುದು. ಒಂದು ಭಾಷಿಕ ಸಮುದಾಯ ಇನ್ನೊಂದು ಭಾಷೆಯ ಜನರ ಸಂಪರ್ಕವಿದ್ದಾಗ ಅವರಲ್ಲಿರುವ ವಸ್ತು, ವಿಷಯ ವ್ಯಕ್ತಿಗಳನ್ನು ಹೆಸರಿಸುವ ಅಗತ್ಯವಿರುತ್ತದೆಯೇ ಹೊರತು ಅದರ ವಿಶೇಷ ಗುಣಧರ್ಮ ಅಲ್ಲದಿರುವುದೆ ಇದಕ್ಕೆ ಕಾರಣವಾಗಿರಬಹುದು. ಇಲ್ಲೂ ಆ ವಿಶೇಷ ಗುಣಧರ್ಮ ಇದಕ್ಕೆ ಕೊಡುವ ಭಾಷೆಯಲ್ಲಿ ಹೊಂದಿದ್ದು ಅರ್ಥ ಸ್ವೀಕರಿಸಿ ಕೊಳ್ಳುವ ಭಾಷೆಯಲ್ಲಿ ವಿವರಿಸುವ ಗುಣಧರ್ಮಕ್ಕಿಂತ ಬೇರೆಯಾಗುವ ಸಾಧ್ಯತೆಗಳೂ ಇರುತ್ತವೆ. ಹೀಗಾಗಿ ಒಂದು ವಸ್ತು, ವಿಷಯ, ವ್ಯಕ್ತಿಯ ಗುಣ ವಿವರಿಸುವ ಗುಣವಾಚಕಗಳು ಅಧಾನ - ಪ್ರದಾನವಾಗುವುದು ಕಡಿಮೆಯೇ ಅನಿಸುತ್ತೆ.

ಗುಲಬರ್ಗಾ ಕನ್ನಡವು ಸ್ವೀಕರಣ ಮಾಡಿಕೊಂಡಿರುವ ಗುಣವಾಚಕಗಳ ಸಂಖ್ಯೆ ನೋಡಿದಾಗ ಮೇಲೆ ಹೇಳಿದ ಮಾತು ಸತ್ಯವೆನಿಸದೆ ಇರದು. ಗುಲಬರ್ಗಾ ಕನ್ನಡವು ವ್ಯಕ್ತಿ, ವಸ್ತುಗಳ ಆಕರ, ರೂಪ, ಸ್ಥಿತಿ ಇಂಥವುಗಳ ಗುಣವನ್ನು ವಿವರಿಸುವ ಪದಗಳಿಗಿಂತ ಅವುಗಳ ಬೌದ್ಧಿಕ ಮಾನಸಿಕ ಅವಸ್ಥೆಗಳನ್ನು ವಿವರಿಸುವಂತಹ ಪದಗಳನ್ನು ಹೆಚ್ಚಾಗಿ ಸ್ವೀಕರಣ ಮಾಡಿಕೊಂಡಿದೆ ಎನ್ನಬಹುದು.

**೪.೧ ಗುಣವಾಚಕಗಳ ಧ್ವನಿಮಾ ಹಂತ**

**೪.೧.೧ ಸ್ವರದಿಂದ ಪ್ರಾರಂಭವಾಗುವ ಪದಗಳು**

**೪.೧.೧.೧** ಸ್ವ(ದಿ)+ವ್ಯ+ಸ್ವ

ಐಟ

**೪.೧.೧.೨** *ಸ್ವ+ವ್ಯ+ಸ್ವ(ದಿ)+ವ್ಯ+ಸ್ವ*

ಅಗಾವ, ಉಜಾಡ, ಉಡಾಳ

**೪.೧.೧.೩** *ಸ್ವ(ದಿ)+ವ್ಯ+ಸ್ವ+ವ್ಯ+ಸ್ವ*

ಆಖರಿ (ಉ)

**೪.೧.೧.೪** *ಸ್ವ+ವ್ಯ+ವ್ಯ+ಸ್ವ+ವ್ಯ+ಸ್ವ*

ಅಪ್ಪುಟ (ಮ)

೪.೧.೧.೫ ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ

ಐನಾತಿ (ಮ)

೪.೧.೨. ವ್ಯಂಜನ

೪.೧.೨.೧ ಎರಡಕ್ಷರ

೪.೧.೨.೧.೧ ವ್ಯ+ಸ್ವ+ವ್ಯ+ಸ್ವ

ಖರ, ಥೆಟ

೪.೧.೨.೧.೨ ವ್ಯ+ಸ್ವ(ದಿ)+ವ್ಯ+ಸ್ವ

ಕೋರ, ಖೋಡಿ, ಘಾಣ, ಚೌಕ, ಖಾಲಿ

೪.೧.೨.೧.೩ ವ್ಯ+ಸ್ವ(ದಿ)+ವ್ಯ+ಸ್ವ(ದಿ)

ಖಾಸಾ, ತಾಜಾ, ಸಾದಾ

೪.೧.೨.೧.೪ ವ್ಯ+ಸ್ವ+ವ್ಯ+ಸ್ವ(ದಿ)

ಜರಾ,

೪.೧.೨.೧.೫ ವ್ಯ+ಸ್ವ+ವ್ಯ+ವ್ಯ+ಸ್ವ

ಕಮ್ಮಿ, ಗಚ್ಚ, ಗರ್ದಿ, ಗುಮ್ಮ

ಜಂಗಿ, ಬರ್ತಿ, ಚಲ್ತಿ, ಲಂಬು

೪.೧.೨.೧.೬ ವ್ಯ+ಸ್ವ+ವ್ಯ+ವ್ಯ+ಸ್ವ(ದಿ)

ಕಚ್ಚಾ, ಪಕ್ಕಾ, ಹಲ್ಕಾ, ಚೊಟ್ಯಾ

೪.೧.೨.೧.೭ ವ್ಯ+ಸ್ವ(ದಿ)+ವ್ಯ+ವ್ಯ+ಸ್ವ

ಖಾತ್ರಿ, ಖೋಟ್ಟಿ, ಜಾಸ್ತಿ

೪.೧.೨.೨. ಮೂರಕ್ಷರ

೪.೧.೨.೨.೧ ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ

ಕಡಕ, ಗರಮ

೪.೧.೨.೨.೨ ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ಜರೂರಿ, ದಿವಾನಿ

೪.೧.೨.೨.೩ ವ್ಯ+ಸ್ವ(ದಿ)+ವ್ಯ+ಸ್ವ(ದಿ)+ವ್ಯ+ಸ್ವ

ಜಾಬಾದ, ಬಾಜಾರಿ

೪.೧.೨.೨.೪ ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ(ದಿ)

ಖಟಾರಾ

೪.೧.೨.೨.೫ ವ್ಯ+ಸ್ವ+ವ್ಯ+ವ್ಯ+ಸ್ವ+ವ್ಯ+ಸ್ವ

ಜಂಗಲಿ, ಹಲ್ಕಟ

೪.೧.೨.೨.೬ ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ವ್ಯ+ಸ್ವ

ಬೇವರ್ಶಿ, ಬೇಶರ್ಮ (ಉ)

೪.೧.೨.೨.೭ ವ್ಯ+ಸ್ವ+ವ್ಯ+ವ್ಯ+ಸ್ವ(ದಿ)+ವ್ಯ

ಕಂಗಾಲ್

೪.೧.೨.೨.೮ ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)

ದುಸರಾ

೪.೧.೨.೩ ನಾಲ್ಕಕ್ಷರ

೪.೧.೨.೩.೧ ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ

ಖಡತರ

೪.೧.೨.೩.೨ ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ+ವ್ಯ+ಸ್ವ

ಬನಾವಟಿ

೪.೧.೨.೩.೩ ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ತಿರಸಾಟ ದಿಲದಾರ, ಜರತಾರಿ

೪.೧.೨.೪ ಐದಕ್ಷರ

ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ+ವ್ಯ+ಸ್ವ(ದಿ)+ವ್ಯ+ಸ್ವ

ದಗಲಬಾಜ

ಸ್ವೀಕೃತ ಗುಣವಾಚಕಗಳನ್ನು ಅವುಗಳು ಹೊಂದಿರುವ ಧ್ವನಿಗಳ ಆಧಾರದ ಮೇಲೆ ವರ್ಗೀಕರಿಸಿದಾಗ ಈ ಮೇಲಿನ ಧ್ವನಿಮಾ ರಚನೆಯುಳ್ಳ ಪದಗಳು ಗುಲಬರ್ಗಾ ಕನ್ನಡದಲ್ಲಿ ಸಂಗ್ರಹಕ್ಕೆ ಸಿಕ್ಕಿವೆ. ಅವು ಎರಡಕ್ಷರ, ಮೂರಕ್ಷರ, ನಾಲ್ಕಕ್ಷರಗಳ ಗುಣಧಾತು ಹೊಂದಿರುವ

ಪದಗಳಾಗಿವೆ. ಇವುಗಳಲ್ಲಿ ಸ್ವರಗಳಿಂದ ಪ್ರಾರಂಭವಾಗಿ ಸ್ವರದಿಂದ ಅಂತ್ಯವಾಗುವ, ದೀರ್ಘಸ್ವರದಿಂದ ಪ್ರಾರಂಭವಾಗುವ, ಅಂತ್ಯಗೊಳ್ಳುವ ಪದಗಳು ಮತ್ತು ಪದ ಮಧ್ಯ ದ್ವಿತ್ವ, ಪದಾಂತ್ಯ ದ್ವಿತ್ವದಿಂದ ಕೂಡಿದ ಪದಗಳನ್ನು ಕಾಣಬಹುದಾಗಿದೆ. ಐದು ಅಕ್ಷರ, ಹತ್ತು ಧ್ವನಿಮಾ ಹೊಂದಿರುವ ಗದಲಬಾಜ ಪದವು ಸಿಕ್ಕ ಏಕೈಕ ದೀರ್ಘ ರಚನೆ ಹೊಂದಿರುವ ಗುಣವಾಚಕ ಪದವಾಗಿದೆ. 'ಕಂಗಾಲ್' ಪದವು ವ್ಯಂಜನಾಂತ್ಯ ಗುಣವಾಚಕವಾಗಿರುವುದು ಕಂಡುಬರುತ್ತದೆ. ಈ ಹೊತ್ತಿಗಾಗಲೇ ಸ್ವೀಕೃತ ಪದಗಳು ಕನ್ನಡ ರಚನೆಗಳಿಗೆ ಹೊಂದಿಕೊಂಡು ಬದಲಾವಣೆಗಳನ್ನು ಮಾಡಿಕೊಂಡಿದೆ. ಅವುಗಳನ್ನು ಹೀಗೆ ಗುರುತಿಸಬಹುದು.

೪.೧.೩ ಅ > ಇ

ಜಂಗ > ಜಂಗಿ

ಗರದ > ಗರ್ದಿ

ಕಮ್ಮ > ಕಮ್ಮಿ

ಖಾತಿರ > ಖಾತ್ರಿ

ಜಾಸ್ತ > ಜಾಸ್ತಿ

ಐನಾತ > ಐನಾತಿ

ಜರೂರ > ಜರೂರಿ

ಬಾಜಾರ > ಬಾಜಾರಿ

ಜಂಗಲ > ಜಂಗಲಿ

ಬನಾವಟ > ಬನಾವಟಿ

ತಿರಸಾಟ > ತಿರಸಾಟಿ

ಜರತಾರ > ಜರತಾರಿ

ದಗಲಬಾಜ > ದಗಲಬಾಜಿ

೪.೧.೪ ಆ > ಇ

ಖೋಟಾ > ಖೋಟಿ

ಥಂಡಾ > ಥಂಡಿ

ದಿವಾನಾ > ದಿವಾನಿ

**೪.೧.೫ ದ್ವಿತ್ವಗೊಂಡಿರುವ ಪದಗಳು**

ಖೋಟಾ > ಖೋಟ್ಟಿ

ಖಾತಿರ > ಖಾತ್ರಿ

**೪.೧.೬ 'ರ' ಕಾರ 'ರ್' ಗಿರುವುದು**

ಬೇವಾರಿಸ > ಬೇವರ್ಸಿ

ಬೇಶರಮ > ಬೇಶರ್ಮಿ

ಗರಮ > ಗರ್ಮಿ

ಇವು ಸ್ವೀಕೃತ ಗುಣವಾಚಕಗಳಲ್ಲಿ ನಡೆದ ಧ್ವನಿಮಾತ್ಮಕ ವ್ಯತ್ಯಾಸಗಳಾಗಿವೆ. ಪದಾಂತ್ಯದ 'ಅ', 'ಆ' ಕಾರಗಳು ಕನ್ನಡದಲ್ಲಿ 'ಇ' ಕಾರಣಗಳಾಗಿ ಬದಲಾಗುತ್ತಿರುವುದು ಇಲ್ಲಿ ಕಾಣಬಹುದು. 'ಅ'ಕಾರ ಕೊನೆ 'ಆ' ಕಾರ ಕೊನೆ, ಎರಡು ಪರಿಸರದಲ್ಲಿ ಪದಗಳೂ ದ್ವಿತ್ವಗೊಂಡಿವೆ. ಪದಮಧ್ಯ ಕಂಪಿತ 'ರ' ಬಂದು ಪರವಾಗಿದ್ದರೇ ಅದು ಅರ್ಕಾವತ್ತಾಗಿ (ರ್) ಬದಲಾಗಿದೆ. ಈ ಪರಿವರ್ತನೆ ಮೂಲದಲ್ಲಿಯೇ ನಡೆದಿರುವ ಸಾಧ್ಯತೆ ಹೆಚ್ಚು. ಏಕೆಂದರೆ ಅ ಕಾರತ್ವ ಪದಗಳಿಗೆ 'ಇ' ಕಾರ ಸೇರಿಸಿ ಪದ ಸೃಷ್ಟಿ ಮಾಡುವ ಪ್ರಕ್ರಿಯೆ ಉರ್ದು ಮತ್ತು ಮರಾಠಿ ಎರಡು ಭಾಷೆಗಳಲ್ಲು ಇದೆ. ಇದು ಪರ್ಶೋ-ಅರೇಬಿಕ್ ಅಥವಾ ಸಂಸ್ಕೃತ ಮೂಲಕ್ಕೆ ಕೊಂಡಯ್ಯಬಹುದು. ಕನ್ನಡವು ಕೂಡಾ ಈ ಪ್ರಕ್ರಿಯೆಯನ್ನು ಸಂಸ್ಕೃತದ ಪ್ರಭಾವದಿಂದಲೆ ಮಾಡಿಕೊಂಡಿರಬೇಕು. ಈ ಪ್ರಕ್ರಿಯೇ ಪರ್ಶೋ-ಅರೇಬಿಕ್ ಹಂತದಲ್ಲೇ ನಡೆದಿರುವುದನ್ನು ಕೆದಿಲಾಯ(೧೯೭೦) ಅವರು ವಿವರಿಸುತ್ತಾರೆ. ಪದರಚನೆಯಲ್ಲಾದ ಬದಲಾವಣೆ ಮೂಲದಲ್ಲಿಯೇ ಆಗಿರುವುದಕ್ಕೆ ಆ ಭಾಷೆಗಳಲ್ಲೆ ಅನೇಕ ಕುರುಹುಗಳು ಸಿಗುತ್ತವೆ. ಆದರೆ ಉಚ್ಚರಣೆಯ ನೆಲೆಯಲ್ಲಿ ಮೂಲ ಉಚ್ಚರಣೆಗೂ ಕನ್ನಡ ಉಚ್ಚರಣೆಗೂ ವ್ಯತ್ಯಾಸವಿದೆ. ಅದನ್ನು ಮುಂದೆ ವಿವರಿಸಲಿದ್ದೇನೆ.

ಜಂಗ > ಜಂಗಿ ಇಂಥಹ ಕೆಲವು ಪದಗಳು ಸೀಮಿತವಲಯದಲ್ಲಿ ಮಾತ್ರ ಬಳಕೆಗೊಳ್ಳುವುದರಿಂದ ಅವು ಮೂಲದಲ್ಲಿ ಆಗಿರುವ ಬದಲಾವಣೆಯನ್ನು ಕನ್ನಡದಲ್ಲು ಮುಂದುವರೆದಿವೆ. ವ್ಯಾಪಕ ಬಳಕೆ ಹೊಂದಿರುವ ಕೆಲವು ಪದಗಳಲ್ಲಿ ಮೂಲದಲ್ಲಿ ನಡೆದಿರುವ ಬದಲಾವಣೆ ಕನ್ನಡಕ್ಕೆ ಬಂದ ಮೇಲೆ ಬದಲಾಗಿರುವುದನ್ನು ಕಾಣಬಹುದಾಗಿದೆ. ಕಮ್ಮ > ಕಮಿ, ಗರಮ > ಗರಮಿ ಇಂತಹ ಪದಗಳು ಮೂಲದ ರಚನಗೆ ತಕ್ಕಂತೆ ಬದಲಾಗಿ ಕನ್ನಡಕ್ಕೆ ಬಂದಿವೆ. ಆದರೆ ಕನ್ನಡಕ್ಕೆ ಬಂದ ಮೇಲೆ ಇವುಗಳು ಕನ್ನಡದಲ್ಲಿ ನಡೆದಿರುವ ದ್ವಿತ್ವಗೊಳ್ಳುವ ಪ್ರಕ್ರಿಯೆಗೆ ಒಳಗಾಗಿವೆ.

ಗರಮ > ಗರಮಿ > ಗರ್ಮಿ

ಕಮ್ಮ > ಕಮಿ > ಕಮ್ಮಿ

ಗರದ > ಗರದಿ > ಗರ್ದಿ

ಈ ಬದಲಾವಣೆ ಸ್ವೀಕರಣಗೊಂಡ ಅನೇಕ ಪದಗಳಲ್ಲಿ ಕಾಣಬಹುದಾಗಿದೆ. ಇದಕ್ಕೆ ಅಪವಾದ ವೆನ್ನುವಂತೆ ಕೆಲವು ಪದಗಳೂ ಮೂಲದಲ್ಲಿಯೇ ಕನ್ನಡದಲ್ಲಿರುವ ಪದ ಹ್ರಸ್ವಿಕರಣ ಕ್ರಿಯೇಯಂತೆ ಬದಲಾಗಿವೆ. (ಬೇವಾರಿಸ > ಬೇವರ್ಸಿ) ಇದು ಮೇಲಿನ ಹೇಳಿಕೆಗೆ ವಿರುದ್ಧವಾದ ಪ್ರಮೇಯವಾಗಿದೆ. ಆದರೂ ಇದು ಆ ಪದಗಳ ಮೂಲ ಭಾಷೆಯಲ್ಲಿಯೇ ಇಂತಹ ಬದಲಾವಣೆ ನಡೆದಿರುವ ಸಾಧ್ಯತೆಗಳನ್ನು ತಳ್ಳಿ ಹಾಕುವಂತಿಲ್ಲ.

**೪.೨. ಆಕೃತಿಮಾ ಹಂತ**

ಗುಣವಾಚಕವು ವ್ಯಕ್ತಿಯ, ವಸ್ತುವಿನ, ವಿಷಯದ ಎಂಥ ಗುಣವನ್ನು ಹೇಳುತ್ತದೆ ಎನ್ನುವ ಆಧಾರದ ಮೇಲೆ ಏಳು ವರ್ಗಗಳಾಗಿ ವಿಂಗಡಿಸಬಹುದು (ಬಟ, ೨೦೧೦). ನಾಮಪದಗಳ ಕೆಲಸದಲ್ಲಿ ಸಹಾಯಕ ವಾಗಬಲ್ಲವು ನಾಮಗುಣವಾಚಕ, ಕ್ರಿಯಾಪದದ ಕೆಲಸದಲ್ಲಿ ಬಳಕೆಗೊಳ್ಳುವ ಗುಣವಾಚಕಗಳು ಕ್ರಿಯಾಗುಣವಾಚಕಗಳು ಎಂದು ಎರಡು ಭಾಗವಾಗಿ ವಿಂಗಡಿಸಬಹುದು.

**೪.೨.೧ ನಾಮ ಗುಣವಾಚಕಗಳು**

ನಾಮಪದಗಳೊಂದಿಗೆ ಸೇರಿ ಪದಪುಂಜಗಳಲ್ಲಿ ಬಳಕೆಯಾಗುವ ಮೂಲಕ ಅವುಗಳಿಗೆ ಸಹಾಯಕವಾಗುವುದೇ ನಾಮಗುಣವಾಚಕಗಳ ಕೆಲಸ. ಹೀಗೆ ನಾಮಪದಗಳೊಂದಿಗೆ ಗುಣವಾಚಕ ಸೇರುವದರೊಂದಿಗೆ ನಾಮಪದವನ್ನು ಒಂದು ನಿರ್ದಿಷ್ಟ ವರ್ಗದ ವಸ್ತುವನ್ನು, ಮನುಷ್ಯರನ್ನು, ವಿಷಯವನ್ನು ವಿವರಿಸುವಂತೆ ಮಾಡುತ್ತದೆ. ಗುಣವಾಚಕಗಳು ನಾಮಪದಗಳ ಮುಖ್ಯ ಗುಣವನ್ನು ಈ ಕೆಳಗಿನ ಪ್ರಕಾರಗಳಲ್ಲಿ ವರ್ಣಿಸುತ್ತದೆ.

**೪.೨.೧.೧ ಆಕಾರ**

| (ಮರಾ) | (ಉರ್ದು) |
|---|---|
| ಚೌಕ, ಪಕ್ಕಾ, ಗುಮ್ಮ | ಹಲ್ಕಾ, (ಹಗುರ), ಚೊಟ್ಯಾ, |
| ಅಪ್ಪುಟ | ಲಂಬು |

**೪.೨.೧.೨ ಮಾನಸಿಕ ಮತ್ತು ಬೌದ್ಧಿಕ ಅವಸ್ಥೆ**

| (ಮರಾ) | (ಉ) |
|---|---|
| ಐಟು, ಖಟ್ಟ, ಖಾಸಾ | ಗುಗ್ಗು, ಘಾಣ, ಖಂಯಿ |
| ಖುರ, ಖೋಡಿ, ಖೊಟ್ಟಿ | ಬರ್ತಿ, ಹಲ್ಕಾ (ಅನೈತಿಕ) |
| ಗರ್ದಿ, ಶ್ಯಾಣ್ಯಾ, ನೇಟ | ಆಖರಿ, ಖಟಾರಾ, ಕಡಕ, |
| ಅಗದಿ, ಅಗಾವ, | ಗರಮ, ಜಂಗಲಿ, ಥಂಡಿ, |
| ಉಜಾಡ, ಉಟಾಳ, ಐನಾತಿ | ಬಾಜಾರಿ, ಹಲ್ಕಟ, ಬೇಶರ್ಮ, |

ಕಂಗಾಲ್, ಜಾಬಾದ, ಝುಕ್ಕಾಸಿ ಚಾಲಾಕಿ,ನಾಜುಕ, ದಿಲದಾರ್,
ದಿವಾನಿ, ಬೆವರ್ಸಿ, ಮಡಸ ಕಿತಾಪತಿ, ಲಂಗಡ್ಯಾ, ದಗಲಬಾಜ
ಹಪ್ಪಾಪಿ, ಖಡತರ, ತಿರಸಾಟಿ,
ಜರತಾರಿ

೪.೨.೧.೩ ಬಣ್ಣ

ಲಾಲ, ಹಳದಿ, ಕಾಳ್ಯ, ನಿಲಾ, ಕಾಳಾ

೪.೨.೧.೪ ಪ್ರಾಯ

ಕೋರ (ಹೊಸದು) (ಮ)

ನಾಮಪದ ಪುಂಜದಲ್ಲಿ ಗುಣವಾಚಕಗಳ ಬಳಕೆಯಂತಹದು ಎಂಬುದನ್ನು ಕೆಳಗೆ ನೋಡಬಹುದು.

- ಖಾಸಾ ಅಣ್ಣ (ಅವನಮ್ಮ ಖಾಸಾ, ಅಣ್ಣ ಹನಾ)
- ಖುರಖುರ್ಪಿ (ಖುರ ಖುರ್ಪಿಲೇ ಜಲ್ದಿ ಕೆಲ್ಸ ಆತಾದ)
- ಖೋಟ್ಟಿಮಾಲ (ಅವ್ನಬಲ್ಲಿ ತೊಬ್ಯಾಡ ಖೊಟ್ಟಿ ಮಾಲ ಕುಡ್ತಾನ)
- ಚೊಟ್ಯಪಾರ (ಅದೂ ಕಿಟೆ ಚೊಟ್ಯಪಾರದಾ)
- ಗರಮ ನೀರ (ಮೈ ತೊಕ್ಕೊಕ ಗರಮ ನೀರಿಡು)
- ಬೇಶರ್ಮ ದಂದ್ಯಾ (ಕಳ್ಳುರದೆನು ಬೇಶರ್ಮ ದಂದ್ಯಾಪಾ)
- ಚಾಲಾಕಿ ಮಂದಿ (ಚಾಲಾಕಿ ಮಂದಿ ಹ್ಯಾಂಗರೆ ಮಾಡಿ ತಪುಸ್ಗೊತಾರ)
- ಪಕ್ಕಾ ಹಣ್ಣ (ಮಾನಕಾಯಿ ಹಿನಾ ಪಕ್ಕಾ ಹಣ್ಣಗಿಲ್ಲ)
- ಅಪ್ಪಟಕಾಯಿ (ಪೂರಾ ಅಪ್ಪುಟ ಕಾಯಿನೆ ನುಂಗ್ದ)
- ಲಾಲಪಟಗಾ (ನಮ್ಮುತ್ಯಾಂದು ಲಾಲ ಪಟಗಾದ)
- ಗನ್ನಕೋರ ಅಂಗಿ (ನಮ್ಮಪ್ಪ ಗನ್ನಕೋರ ಅಂಗಿ ತಂದಾನ)

ಈ ರೀತಿ ಬಳಕೆಗಳನ್ನು ಕಾಣುವ ಕೆಲವು ಮಾದರಿ ವಿವರಿಸಲಾಗಿದೆ. ಅವು ಮೂಲ+ಮೂಲ ಅಥವಾ ಮೂಲ+ಕನ್ನಡ ಹೀಗೆ ಕೂಡಿ ಪದಪುಂಜವಾಗಿರುವುದು ಕಂಡಬರುತ್ತದೆ. ಇವುಗಳಲ್ಲದೆ

ನಾಮಪದಗಳು ಗುರುತಿಸುವ ವ್ಯಕ್ತಿ, ವಸ್ತು ಮೊದಲಾದವುಗಳ ಸಂಖ್ಯೆ ಸೂಚಿಸುವ ಪಯಲೆ, ದುಸರಾ, ಮಣಾ, ಪಂಚಿಸ, ಪನ್ನಾಸ ಇಂತಹ ಸಂಖ್ಯಾವಾಚಕಗಳೂ ಬಳಕೆಯಲ್ಲಿವೆ.

**೪.೨.೨. ಕ್ರಿಯಾ ಗುಣವಾಚಕಗಳು**

ಮುಖ್ಯವಾಗಿ ಮೂರು ರೀತಿಯಲ್ಲಿ ಕ್ರಿಯಾಪದಗಳ ಗುಣವನ್ನು, ಕ್ರಿಯಾ ಗುಣಪದಗಳು ವಿವರಿಸುತ್ತವೆ. ಅವುಗಳು ಘಟನೆ ವಿಧಾನ, ಸಮಯ, ಸ್ಥಳ ಇವುಗಳ ಗುಣವನ್ನು ಹೇಳುತ್ತವೆ.

**೪.೨.೨.೧ ಘಟನೆ ವಿಧಾನ**

ಜರ‍್ರನೆ, ಗಚ್ಚಕನೆ, ಜಕ್ಕನೆ, ಬರ‍್ರನೆ

ಖಟ್ಟಂತ, ಗಡದ್ದಾಗಿ

**೪.೨.೨.೨ ಸಮಯ**

ಜಟ್ಪನೆ, ಗಪ್ಪನೆ, ಸದ್ದ

ಜಲ್ದ, ಅಟೋಡಿ

ಸ್ವೀಕರಣ ಪದಗಳನ್ನು -ಆನೆ, -ಅಂತ, -ಆಗಿ, -ಇ ಪ್ರತ್ಯಯಗಳನ್ನು ಸೇರಿಸುವುದರ ಮೂಲಕ ಅವುಗಳನ್ನು ಕ್ರಿಯಾ ಗುಣವಾಚಕವನ್ನಾಗಿಸಿ ಪರಿವರ್ತಿಸಬಹುದು. ಇವುಗಳಲ್ಲಿ ನಾಮಪದಗಳಿಗಿಂತ ಅನುಕರಣವಾಚಿ ಪದಗಳೇ ಹೆಚ್ಚಾಗಿ ಬಳಕೆಗೊಳ್ಳುತ್ತಿರುವುದು ಗುರುತಿಸಬಹುದು.

ಇವುಗಳು ಕ್ರಿಯಾಪದಪುಂಜಗಳಲ್ಲಿ ಬಳಕೆಗೊಳ್ಳುವುದನ್ನು ಹೀಗೆ ನೋಡಬಹುದು.

ಜರುಕ್ಕನೆಕುಂತ (ಬಂದವ್ನೆಬಂದ ಜರ‍್ರಕ್ಕನೆ ಜಾರಿಬಿದ್ದ)

ಗಚಕನೆ ಚುಚ್ಚು (ಚಾಕು ಗಚಕ್ಕನೆ ಚುಚ್ದ, ಸತ್ತೊಯ್ತು)

ಖಟಂತ ಬಡಿ (ಕೈಗೆ ಮಳಿ ಬಟ್ಟಂತ ಬಡಿತು)

ಗಡದ್ದಾಗಿ ತಿಂದ (ಗಡದ್ದಾಗಿ ತಿಂದೊದ)

ಜಟ್ಪನೆ ಬಾ (ಹೋಗಿ ಜಿಟ್ಪನೆ ಬಾ)

ಗಪ್ಪನೆ ಕೂಡು (ಜಲ್ದಿ ಗಪ್ಪನೆ ಕೂಡು)

ಸದಬೆಕು (ನನಗ ಈಗ ಸದ್ದಬೇಕು)

ಕನ್ನಡದಲ್ಲಿ ಗುಣವಾಚಕ ಧಾತುವಿನಿಂದಲೂ ಗುಣವಾಚಕಗಳನ್ನು ಸಾಧಿಸಬಹುದಾಗಿದೆ. ಆದರೆ ಗುಲಬರ್ಗಾ ಪರಿಸರದಲ್ಲಿ ಸ್ವೀಕರಿಸಿರುವ ಪದಗಳಲ್ಲಿ ಅಂತಹ ಯಾವ ಉದಾಹರಣೆಗಳು ಉಪಲಬ್ದ ವಾಗಿಲ್ಲ. ಇದರ ಬಗ್ಗೆ ಇನ್ನು ಸೂಕ್ಷ್ಮ ಅವಲೋಕನದ ಅಗತ್ಯವಿದೆ. ಈ ವಿಷಯದ ಬಗ್ಗೆ ಇನ್ನು ಅಧ್ಯಯನಗಳು ಬಂದರೆ ಸಾಧ್ಯವಾಗಬಲ್ಲದು.

ಅಧ್ಯಾಯ ಆರು

# ಗುಲಬರ್ಗಾ ಕನ್ನಡ ನುಡಿ : ಸ್ವೀಕೃತ ಸಂಖ್ಯಾವಾಚಕಗಳ ರಚನೆ

**ಮಾ**ನವನು ಭಾಷೆಯನ್ನು ಸೃಷ್ಟಿಸುವ ಮುನ್ನವೇ ಎಣಿಕೆ ಪದ್ಧತಿಯನ್ನು ರೂಢಿಸಿಕೊಂಡಿರಬೇಕು. ತನ್ನೊಂದಿಗಿರುವ ವ್ಯಕ್ತಿಗಳು, ತಾನು ಸಾಕಿರುವ ಪ್ರಾಣಿಗಳು ಅಥವಾ ತನ್ನದೆಂದು ಗುರುತಿಸಿಕೊಂಡಿರುವ ವಸ್ತುಗಳನ್ನು ನೆನಪಿನಲ್ಲಿಟ್ಟುಕೊಳ್ಳಲು ಒಂದು ಎಣಿಕೆಯ ಕ್ರಮ ರೂಢಿಸಿಕೊಂಡಿರಬೇಕು. ಕುರಿಗಾಯಿಯೊಬ್ಬ ತನ್ನ ಕುರಿಯ ಲೆಕ್ಕವಿಡಲು ಮಾಡಿರುವ ತಂತ್ರದ ಕಥೆ ಎಲ್ಲರಿಗೂ ಗೊತ್ತಿದೆ. ಆದಿಮಾನವನು ಗೇರೆ ಕೋಕೆದೋ, ಕಲ್ಲು, ಹರಳು ಇಟ್ಟುಕೊಂಡೊ ಎಣಿಕೆ ಮಾಡುತ್ತಿರುವುದಕ್ಕೆ ಕುರುಹಗಳು ಸಿಗುತ್ತವೆ. ಮಾನವನು ಭಾಷೆಯನ್ನು ರೂಢಿಸಿಕೊಳ್ಳುತ್ತಲೇ ಎಣಿಕೆಗೆ ಪದಗಳನ್ನು ರೂಪಿಸಿರಬೇಕು. ಇಲ್ಲಿಯವರೆಗಿನ ವ್ಯಾಕರಣಕಾರರು ಸಂಖ್ಯಾವಾಚಕಗಳನ್ನು ನಾಮಪದ ವರ್ಗದಲ್ಲಿ ವಿವರಿಸಿದ್ದಾರೆ. ಶಂಕರಭಟ್ಟರು (ಹಳೆಗನ್ನಡ ವ್ಯಾಕರಣ ಎಂಥದ್ದು) ಇದು ಸರಿಯಾದ ಕ್ರಮವಲ್ಲ, ಸಂಖ್ಯಾವಾಚಕಗಳು ನಾಮ, ಕ್ರಿಯಾ, ಗುಣವಾಚಕಗಳಂತೆ ಸ್ವತಂತ್ರ ಅಸ್ಥಿತ್ವ ಹೊಂದಿರುವವು ಹೀಗಾಗಿ ಅವುಗಳನ್ನು ಸ್ವತಂತ್ರವಾಗಿ ವಿವರಿಸುವ ಅಗತ್ಯವಿದೆ ಎನ್ನುತ್ತಾರೆ.

ಸಾಮಾನ್ಯವಾಗಿ ಎಲ್ಲಾ (ಹೆಚ್ಚಿನವು) ಭಾಷೆಗಳ ಸಂಖ್ಯಾವಾಚಕಗಳು ದಶಮಾನ ಪದ್ಧತಿಯನ್ನೆ ಅನುಸರಿಸುತ್ತಿವೆ. ಪ್ರತಿಯೊಂದು ಭಾಷೆಯು ತನ್ನದೇ ಆದ ಎಣಿಕೆ ಕ್ರಮ ಹೊಂದಿರುತ್ತವೆ. ಸಂಖ್ಯಾವಾಚಕಗಳಂತ ಪದವರ್ಗ ಸ್ವೀಕರಣಕ್ಕೊಳಗಾಗುವುದು ಕಷ್ಟಸಾಧ್ಯವೆಂಬುದು ವಿದ್ವಾಂಸರ ನಂಬಿಕೆ. ಸಂಖ್ಯಾವಾಚಕ ಪದಗಳು ಒಂದು ಸಂಖ್ಯೆಯು ಲೆಕ್ಕವಿಲ್ಲದಷ್ಟು ಸಂಖ್ಯೆಯನ್ನು ಸೃಷ್ಟಿ ಮಾಡಬಲ್ಲ ಶಕ್ತಿ ಹೊಂದಿರುತ್ತದೆ. ಹೀಗಾಗಿ ಒಂದು ಸಂಖೆ ಸ್ವೀಕರಿಸಿದರೆ ಅದರಿಂದ ಹುಟ್ಟುಬಲ್ಲ ಎಲ್ಲಾ ಸಂಖ್ಯೆಗಳನ್ನುಸ್ವೀಕರಿಕೊಳ್ಳಬೇಕಾಗುತ್ತದೆ. ಹೀಗಾಗಿಯೇ ಸಂಖ್ಯಾ ವಾಚಕಗಳ ಸ್ವೀಕರಣ ಕಠಿಣವಾದದ್ದು. ಆದರೂ ಇಂದು ಅನೇಕ ಭಾಷೆಗಳು ತಮ್ಮ ಮೂಲ ಎಣಿಕೆ ಪದ್ಧತಿಯೊಂದಿಗೆ ಇಂಗ್ಲಿಷನಂತಹ ಭಾಷೆಯ ಎಣಿಕೆ ಕ್ರಮ ಅನುಸರಿಸುತ್ತಿರುವುದು ಕಂಡುಬರುತ್ತದೆ.

ಒಂದು ಭಾಷೆ ಸ್ವಂತ ಎಣಿಕೆ ಪದಗಳು ಹೊಂದಿದ್ದು ಇನ್ನೊಂದು ಭಾಷೆಯ ಎಣಿಕೆ ರೂಪಗಳನ್ನು ಸ್ವೀಕರಿಸಿಕೊಳ್ಳಬೇಕಾದರೆ ಆ ಎರಡೂ ಭಾಷೆಗಳ ನಡುವಿನ ಸಂಬಂಧದ ಮೇಲೆ ನಿರ್ಧರಿಸಬೇಕು. ಆ ಭಾಷೆಯ ಗಟ್ಟಿ ಪ್ರಭಾವಕ್ಕೊಳಗಾಗಿರಬೇಕು. ಇಲ್ಲಾ ಆ ಭಾಷೆಯ ಹೇರಿಕೆಗೊಳಗಾಗಿರಬೇಕು. ಇಂತಹ ಸನ್ನಿವೇಶಗಳು ಭಾರತದಂತಹ ಬಹುಭಾಷಿಕ ಪರಿಸರದಲ್ಲಿ ಬಹುಬೇಗ ನಿರ್ಮಾಣವಾಗುತ್ತವೆ.

ಕನ್ನಡವು ತನ್ನ ಸ್ವಂತದ ಸಂಖ್ಯಾಪದ್ಧತಿ ಹೊಂದಿದೆ. ಅನೇಕ ಸಂದರ್ಭ(ಸಾಂಸ್ಕೃತಿಕ, ಆಡಳಿತಾತ್ಮಕ)ಗಳಲ್ಲಿ ಸಂಸ್ಕೃತ ಸಂಖ್ಯಾವಾಚಕಕ್ಕೆ ಕೈ ಚಾಚಿದ್ದು ಕಂಡುಬರುತ್ತದೆ. ಇತ್ತೀಚಿನ ಶತಮಾನಗಳಲ್ಲಿ ಇಂಗಿಷ್ ಎಲ್ಲಾ ಕ್ಷೇತ್ರ ಆವರಿಸಿಕೊಂಡಿರುವಂತೆ ಭಾಷಿಕ ಘಟಕಗಳಿಗೂ ವಿಸ್ತರಿಸಿದೆ. ಗುಲಬರ್ಗಾದಂತಹ ಬಹುಧಾರ್ಮಿಕ, ಬಹುಭಾಷಿಕ ಗಡಿ ಪ್ರದೇಶಗಳು ಹಲವು ರಾಜಕೀಯ ಆಡಳಿತಕೊಳ್ಳಪಟ್ಟು ತಮ್ಮ ಮೂಲ ಎಣಿಕೆ ರೂಪಗಳೊಂದಿಗೆ ಉರ್ದು, ಮರಾಠಿಯಂತಹ ಅನ್ಯ ಭಾಷೆಯ ಪದಗಳ ಪ್ರಭಾವಕೊಳ್ಳಗಾಗುತ್ತವೆ.

ಗುಲಬರ್ಗಾ ಕನ್ನಡವು ತನ್ನ ಮೂಲ ಸಂಖ್ಯಾವಾಚಕಗಳಿಗಿಂತ ರಾಚನಿಕವಾಗಿ ಭಿನ್ನವಾಗಿರುವ ಮರಾಠಿ, ಉರ್ದು ಮತ್ತು ಆಧುನಿಕ ಶಿಕ್ಷಿತ ಪ್ರಭೇದ ಇಂಗ್ಲಿಷ್ ಸಂಖ್ಯಾವಾಚಕ ರೂಪಗಳನ್ನು ಸ್ವೀಕರಿಸಿ ಕೊಂಡಿದೆ. ಈ ಸಂಖ್ಯಾವಾಚಕಗಳು ಉಳಿದ ಸ್ವೀಕೃತ ಭಾಷಿಕ ಘಟಕಗಳಂತೆ ಬದಲಾಗದೆ ಇರುವುದು ಆಶ್ಚರ್ಯಕರ ಸಂಗತಿಯಾಗಿದೆ. ಸಂಖ್ಯಾವಾಚಕಗಳ ಮೇಲಿನ ಹೊಸ ಅಧ್ಯಯನಗಳು ಹೆಚ್ಚಿನ ಮಾಹಿತಿ ಒದಗಿಸಬಲ್ಲವು.

ಕನ್ನಡದ ಮೂಲ ಸಂಖ್ಯಾವಾಚಿಗಳು ಅಷ್ಟಮಾನ ಪದ್ಧತಿಯಿಂದ ದಶಮಾನ ಪದ್ಧತಿಗೆ ತಿರುಗಿದವುಗಳು. ಉರ್ದು, ಮರಾಠಿಯಿಂದ ಬಂದ ಸಂಖ್ಯಾವಾಚಕಗಳು ದಶಮಾನ ಪದ್ಧತಿ ಹೊಂದಿವೆ. ರಾಚನಿಕವಾಗಿ ನೋಡಿದರೆ ಸ್ವೀಕೃತ ಸಂಖ್ಯಾವಾಚಿಗಳು ಭಿನ್ನರಚನೆ ಹೊಂದಿವೆ. ಈ ಸಂಖ್ಯಾವಾಚಕಗಳಲ್ಲಿ ಒಂದರಿಂದ ಹತ್ತು, ನೂರು, ಸಾವಿರ, ಸಂಖ್ಯೆಗಳ ರಚನೆಯಿಲ್ಲದ ಪದಗಳಾಗಿವೆ. ಉಳಿದಂತೆ ಈ ಸಂಖ್ಯಾವಾಚಿಗಳು ಕೂಡಿಸುವ, ಗುಣಿಸುವ ಮತ್ತು ಕಳೆಯುವ ಕ್ರಮದ ಮೂಲಕ ಸಂಖ್ಯೆಯನ್ನು ಸಂಯುಕ್ತಿಕರಿಸಿಕೊಳ್ಳುವುದು ಕಾಣಬಹುದು.

**೬.೧. ಕೂಡಿಸುವ ಪದ್ಧತಿ**

| ಮರಾಠಿ | ಉರ್ದು | |
|---|---|---|
| ಅಕ್ರಹ | ಗ್ಯರಾ | (?)+ದಹ |
| ಬಾರಹ | ಬಾರಾ | ?+ದಹ |
| ತೆರಹ | ತೆರಾ | ತಿನ+ದತ |

| | | |
|---|---|---|
| ಚೌದಹ | ಚೌದಾ | ಚಾರ+ದತ |
| ಪಂದ್ರಾಹ | ಪಂದ್ರಾ | ಪಾಂಚ+ದಹ |
| ಸೊಲಾಹ | ಸೊಳಾ | ಸಹಾ+ದಹ |
| ಸತ್ರಾಹ | ಸತ್ರಾ | ಸಾತ+ದಹ |
| ಅಟ್ರಾಹ | ಅಟ್ರಾ | ಆಟ+ದಹ |

೬.೨. **ಕಳೆಯುವ ಪದ್ಧತಿ**

| **ಮರಾಠಿ** | **ಉರ್ದು** | |
|---|---|---|
| ಎಕ್ಕೊಣಿಸ | ಉನ್ನಿಸ | (ಎಕವಿ-ಉಸ) |
| ಎಕೊಣತಿಸ | ಉತ್ತಿಸ | (ಎಕವಿ-ತಿಸ) |
| ಎಕ್ಕೊಣಚಾಳಿಸ | ಉನ್ನಚಾಲಿಸ | (ಎಕವಿ-ಚಾಳಿಸ) |
| ಎಕ್ಕೊಣ ಪನ್ನಾಸ | ಉನೆಪನ್ನಾಸ | (ಎಕವಿ-ಪನ್ನಸ) |
| ಎಕ್ಕೊಣ ಸಾಟ | ಉನ್ನಸಾಟ | (ಎಕವಿ-ಸಾಟ) |
| ಎಕ್ಕೊಣೆತ್ತೆರ | ಉನ್ನತರ | (ಎಕವಿ-ಸತ್ತರ) |
| ಎಕೊಣ್ಯೆಂಸಿ | ಉನಅಂಶಿ | (ಎಕವಿ-ಅಂಶಿ) |
| ಎಕ್ಕೊಣನವದ | ಉನನವ್ವದ | (ಎಕವಿ-ನವ್ವದ) |

೬.೩. **ಗುಣಿಸುವ ಪದ್ಧತಿ**

| **ಮರಾಠಿ** | **ಉರ್ದು** | |
|---|---|---|
| ವಿಸ | ಬಿಸ | ದೊಢದಸ |
| ತಿಸ | ತಿಸ | ತಿನಢದಸ |
| ಚಾಳಿಸ | ಚಾಲಿಸ | ಚಾರಢದಸ |
| ಪನ್ನಾಸ | ಪನ್ನಾಸ | ಪಾಂಚಢದಸ |
| ಸಾಟ | ಸಾಟ | ಛೆಢದಸ |

| | | |
|---|---|---|
| ಸತ್ತರ | ಸತ್ತರ | ಸಾತಧದಸ |
| ಐಂಶಿ | ಅಸ್ಸಿ | ಆಟಧದಸ |
| ನವ್ವದ | ನೌದೊ | ನೌಧದಸ |

ಇಂತಹ ರಚನೆಯನ್ನು ಗುರುತಿಸಬಹುದು. ಕೂಡಿಸುವ ಕ್ರಮದಲ್ಲಿ ಸ್ವೀಕರಣ ಸಂಖ್ಯಾವಾಚಕಗಳು ಇಂಗ್ಲಿಷ್‌ನ ಋಟದಿಣಜಚು, ಈಣಾದಿಣಜಚು... ಮತ್ತು ಸಂಸ್ಕೃತದ ಏಕಾದಶ, ದ್ವಾದಶ, ತ್ರಯೋದಶ.... ಇವುಗಳಂತಿದ್ದು, ಕನ್ನಡದ ರಚನೆಗೆ ತದ್ವಿರುದ್ಧವಾಗಿದೆ. ಕನ್ನಡವು ಹತ್ತು+ಒಂದು, ಹತ್ತು+ಎರಡು ... ಈ ರಚನೆ ಹೊಂದಿದೆ. ಇಲ್ಲಿ ಈ ಸಂಖ್ಯೆಗಳಲ್ಲಿ ಏಕ+ದಶ, ಚಾರ+ವಿಸ, ಆಟ+ಸತ್ತರ... ಇಂತಹ ರಚನೆ ಹೊಂದಿವೆ. ಗುಣಿಸುವ ಪದ್ಧತಿಯು ಕನ್ನಡದಂತಹ ವಿರುದ್ಧ ರಚನೆಯೇ ಹೊಂದಿವೆ. ಕನ್ನಡದಲ್ಲಿ ಒಂಬತ್ತರ ನಡೆಯೇ ಸ್ವೀಕೃತ ಸಂಖ್ಯಾವಾಚಕಗಳಲ್ಲು ಕಂಡುಬರುತ್ತದೆ. ಅವು ಕಳೆಯುವ ಕ್ರಮ ಅನುಸರಿಸುತ್ತಿವೆ. ಆದರೆ ಇವು ವಿವಾದ ಮುಕ್ತ ರಚನೆ ಹೊಂದಿವೆ.

ಸಂಖ್ಯಾವಾಚಕ ಪದಗಳು ಒಂದರಿಂದ ಹತ್ತರವರೆಗಿನ ಸಂಖ್ಯೆಗಳೊಂದಿಗೆ ಕೂಡಿ ಹೊಸ ಸಂಖ್ಯೆಗಳು ರಚನೆಕೊಳ್ಳುವುದು ಭಾಷೆಯ ಸಹಜ ಪ್ರಕ್ರಿಯೆ. ಮರಾಠಿ, ಉರ್ದುವಿನಿಂದ ಬಂದ ಸಂಖ್ಯಾವಾಚಕಗಳು ಈ ಪ್ರಕ್ರಿಯೆಯನ್ನು ಕನ್ನಡದಲ್ಲಿ ಹೇಗೆ ಮಾಡಿಕೊಂಡಿವೆ ಎನ್ನುವುದನ್ನು ಹೀಗೆ ಗುರುತಿಸಬಹುದು.

### ೬.೪.೧ ಏಕ

ಸಂಖೆ ಏಕ ವು ರಚನೆ ಹೊಂದಿರದ ಸ್ವತಂತ್ರ ಸಂಖ್ಯಾ ರೂಪವಾಗಿದೆ. ಇದು ದಶಮಾಂಶ ಹೊಂದಿರುವ (ಹತ್ತರಿಂದ ಗುಣಿತವಾಗಿ ರಚನೆಗೊಂಡ ರೂಪಗಳು). ರೂಪಗಳೊಂದಿಗೆ ಸೇರಿದಾಗ

ಅಕ - ಅಕ್ರಹ (ಮ)

ಗ್ಯ - ಗ್ಯರಾ (ಉ)

ಏಕ - ಎಕವಿಸ (ಮ-ಉ)

ಏಕತಿಸ (ಮ-ಉ)

ಏಕ್ತಾಳಿಸ (ಉ)

ಏಕಸಾಟ (ಮ-ಉ)

ಏಕ್ಕಎಕ್ಕೆಚಾಳಿಸ (ಮ)

ಏಕ್ಯಂಸಿ (ಮ-ಉ)

ಏಕ್ಕಾ - ಎಏಕ್ಕಾವನ (ಮ-ಉ)

ಏಕ್ಯ - ಎಕ್ಯತ್ತರ (ಮ-ಉ), ಎಕ್ಯನೌ (ಮ-ಉ)

ಹೀಗೆ ಧ್ವನಿಮಾತ್ಮಕ ಬದಲಾವಣೆ ಹೊಂದುತ್ತದೆ. ಮೇಲಿನ ರಚನೆಗಳಲ್ಲಿ ಗ್ಯರಾಹ (ಉ) ಈ ರಚನೆಯ ವಿಶ್ಲೇಷಣೆ ಕಷ್ಟಕರವಾದದ್ದು. ಇಲ್ಲಿ ಏಕ ಗ್ಯಾರಹ ಆಗಿ ಬದಲಾಗುತ್ತಿದೆ. ಇದರ ನಿಷ್ಪತ್ತಿ ಬಗ್ಗೆ ಸೂಕ್ಷ್ಮ ಅವಲೋಕನದ ಅಗತ್ಯವಿದೆ. ಉಳಿದಂತೆ ಎಲ್ಲ ಸಂಖ್ಯೆ ಸರಳ ಸಮಾನಗೊಂಡಿವೆ. ನೂರು, ಸಾವಿರದೊಂದಿಗೆ ಸೇರುವಲ್ಲಿ ಮೂಲದ ಉಚ್ಚಾರಣೆಯೆ ಉಳಿಸಿಕೊಂಡಿದೆ. ನೂರು, ಸಾವಿರಗಳಲ್ಲಿ ಏಕ , ಶೂನ್ಯವಾಗಿರುತ್ತದೆ. ಅಂದರೆ ಏಕಸೊ, ಏಕಹಜಾರ ಹೀಗನ್ನದೆ ಬರಿ ಸೌ ಸೆಂಬೊರ, ಹಜಾರ ಎಂದರೂ ಅದರಲ್ಲಿ ಒಂದು ಇರುತ್ತದೆ. ಬಾರಹಜಾರ ರೂಪ್ಯೆ ಬೇಗಾಕಿವು ಹಜಾರ ರೂಪ್ಯೆಗೊಂದು ಈ ಎರಡೂ ಉದಾಹರಣೆಗಳು ಒಂದು ಸಾವಿರ ಎನ್ನುವದನ್ನೇ ಪ್ರತಿನಿಧಿಸುತ್ತವೆ. (ಸೆಂಬೇರಿ, ಹಜಾರ)

**೬.೪.೨. ದೊನ (ಮರಾ) ದೊ (ಉ)**

ಸಂಖ್ಯೆ ದೊನ, ದೊಗಳು ರಚನೆ ಹೊಂದಿರದ ಸಂಖ್ಯಾವಾಚಕಗಳಾಗಿವೆ. ಸಂಯುಕ್ತ ಸಂಖ್ಯಾವಾಚಕ ಗಳಲ್ಲಿ ಇದರ ನಡೆಯನ್ನು ಹೀಗೆ ಗುರುತಿಸಬಹುದು.

ಬಿ - ಬಿಸ (ಮ)

ವಿ - ವಿಸ (ಉ)

ಬಾ - ಬಾರಾಹ (ಮ-ಉ)

ಬಾವಿಸ (ಮ-ಉ)

ಬಾವನ (ಮ-ಉ)

ಬಾಸಾಟ (ಮ-ಉ)

ಬಾಹತ್ತದರ (ಮ-ಉ)

ಬ - ಬತ್ತಿಸ (ಮ-ಉ)

ಬೆ - ಬೆಚಾಳಿಸ (ಮ-ಉ)

ಬ್ಯ - ಬ್ಯಅಂಸಿ (ಮ-ಉ)

ಬ್ಯಣಾ (ಮ-ಉ)

ಮೇಲಿನ ವಿಸ-ಬಿಸಗಳು ಕನ್ನಡದ ಬ > ವ ಈ ಪರಿವರ್ತತೆಯಂತೆ ಇರುವುದು ಕಂಡು ಬಂದರು ಇಲ್ಲಿ ಆ ಪರಿವರ್ತನೆ ಆಗಿರದೆ ಸಹಜ ರೂಪ ಎನ್ನಬಹುದು. ಈ ಸಂಖ್ಯೆಯು ನೂರು, ಸಾವಿರದೊಂದಿಗೆ ಸೇರುವಾಗ ಮೂಲದ ಉಚ್ಚಾರಣೆಯನ್ನೆ ಉಳಿಸಿಕೊಳ್ಳುತ್ತದೆ. ದೊನಸೇ, ದೊಸೋ(ಉ) ದೊನಹಜಾರ(ಮ), ದೊಹಜಾರ(ಉ) ಇತ್ಯಾದಿ.

**೬.೪.೩. ತಿನ (ಮ-ಉ)**

ಸ್ವೀಕೃತ ಸಂಖ್ಯೆ ತಿನ ಸ್ವತಂತ್ರ ರಚನೆ ಹೊಂದಿರುವ ಪದವಾಗಿದೆ. ಹೊಸ ಪದಗಳ ರಚನೆಯಲ್ಲಿ

ತಿ - ತಿಸ (ಮ-ಉ)

ತೆ - ತೆರಾಹ (ಮ-ಉ)
ತೆವಿಸ (ಮ-ಉ)
ತೆತ್ತಿಸ (ಮ-ಉ)

ತ್ರೆ - ತ್ರೆಚಾಲಿಸ (ಮ-ಉ)
ತ್ರೆಪನ (ಮ)
ತ್ರೆಸಸ್ಪ (ಮ)
ತ್ರೆಹತ್ತರ (ಮ)
ತ್ರೆಯಂಸಿ (ಮ-ಉ)

ತಿರ - ತಿರತಾಳಿಲ (ಉ)
ತಿರಪನ್ (ಉ)
ತಿರಸಾಟ್ (ಉ)

ತ್ರಿ - ತಿಯಂಸಿ (ಉ)

ತಿರ್‍ಯಾ - ತಿರ್‍ಯಾತರ (ಉ)
ತಿರ್‍ಯಾನೌ (ಉ)

ಈ ರೀತಿಯ ರೂಪ ಭಿನ್ನತೆ ಪಡೆದುಕೊಂಡಿದೆ. ನೂರು, ಸಾವಿರದಲ್ಲಿ ಮೂಲದ ಉಚ್ಚಾರಣೆಯನ್ನೇ ಇಲ್ಲಿನ ಸಂಖ್ಯೆ ತರಿಸಾಟವು ಮನುಷ್ಯನ ವಿಚಿತ್ರ ವರ್ತನೆ ಅಥವಾ ಹುಚ್ಚುತನ, ಮೊಂಡುತನ ವಿವರಿಸಲು ಬಳಕೆಗೊಳ್ಳುತ್ತದೆ. ಆ ಪಾರ ಎನ್ ತಿರಸಾಟಿ ಅದೊರೊ ಇಂತ ತಿರಸಾಟಿ ಮಂದಿಸರಿ ಬದ್ದಿಕಟ್ಯಾದ ಮಸ್ಕಿಲದಾ ಉಳಿಸಿಕೊಂಡಿದೆ.

### ೬.೪.೪. ಚಾರ (ಮರಾ-ಉ)

ಸ್ವೀಕೃತ ಸಂಖ್ಯೆ ಚಾರ ಸ್ವತಂತ್ರ ರಚನೆ ಹೊಂದಿದ ಸಂಖ್ಯಾವಾಚಿಯಾಗಿದೆ. ಸಂಯುಕ್ತ ಪದವಾಗುವಾಗ ಇದು ರೂಪ ಬದಲಾವಣೆಗೊಳಗಾಗುತ್ತದೆ.

ಚೌ - ಚೌದಾಹ (ಮ-ಉ)

ಚೌವಿಸ (ಉ)

ಚೌಬಿಸ (ಉ)

ಚೌತಿಸ (ಮ-ಉ)

ಚೌತಾಳಿಸ (ಉ)

ಚೌಪನ (ಮ-ಉ)

ಚೌಸಸ್ಟ (ಮ)

ಚೌಸಟ (ಉ)

ಚೌರೆಖೂ - ಚೌರೆಚಾಳ (ಮ)

ಚೌರೆತ್ತರ (ಮ)

ಚೌರ್ಯೆಂಸಿ (ಮ-ಉ)

ಚೌರ್ಯ - ಚೌರ್ಯಣೌ (ಮ-ಉ)

ಈ ರೂಪ ಭಿನ್ನತೆಗಳನ್ನು ಗುರುತಿಸಬಹುದು. ಚಾರ ಹತ್ತರಿಂದ ಗುಣಿಸಿ ಪದ ರಚನೆಯಾಗುವಾಗ ಮರಾಠಿಯಲ್ಲಿ ಚಾಲಿಸ ಉರ್ದುವಿನಲ್ಲಿ ಚಾಳಿಸ ಎಂದಾಗಿದೆ. ಈ ಎರಡೂ ರೂಪಗಳಲ್ಲಿ ಲ > ಳ ಬೇಧವಿದೆ. ನೂರರ ಮುಂದಿನ ಪದಗಳಲ್ಲಿ ಮೂಲ ರೂಪದಲ್ಲಿ ಬಳಕೆ ಹೊಂದಿದೆ.

### ೬.೪.೫. ಪಾಂಚ (ಮರಾ-ಉ)

ಸ್ವೀಕೃತ ಸಂಖ್ಯೆ ಪಾಂಚ ಸ್ವತಂತ್ರ ರಚನೆ ಹೊಂದಿದ ಪದವಾಗಿದೆ. ಈ ರೂಪ ಸಂಯುಕ್ತ ಸಂಖ್ಯೆ ನಿರ್ಮಾಣ ಕಾರ್ಯದಲ್ಲಿ ಧ್ವನಿಮಾತ್ಮಕವಾಗಿ ಬದಲಾದದ್ದನ್ನು ಕಾಣಬಹುದಾಗಿದೆ.

ಪನ್ - ಪಂದ್ರಾ (ಮ-ಉ)

ಪನ್ನಾಸ (ಮ-ಉ)

ಪಂಚ - ಪಂಚವಿಸ (ಮ) ಪಂಚಿಸ (ಉ)

ಪಂಚ್ಯೆಂಸಿ (ಮ-ಉ)

ಪಸ್ - ಪಸತಿಸ (ಮ)

ಪೈಂ - ಪೈಂತಿಸ (ಉ)

ಪೈಂತಾಳಿಸ (ಉ)

ಪೈಂಸಾಟ (ಉ)

ಪಂಚೆ - ಪಂಚೆಚಾಳ (ಮ)

ಪಂಚೆಸಸ್ವ (ಮ)

ಪಂಚೆತ್ತರ (ಮ)

ಪಂಚಾ - ಪಂಚಾವನ (ಮ)

ಪಂಚಾತ್ತರ (ಉ)

ಪಂಚಾತ್ತರ (ಮ)

ಪಂಚಾಣಾ (ಮ-ಉ)

ಪಾನ್ - ಪಾನಸೆ (ಮ)

ಪಾನಸೊ (ಉ)

ಸಂಖ್ಯೆ ಪಾಂಚ ಇಪತ್ತರಿಂದ ತೊಂಬತ್ತರವರೆಗಿನ ಸಂಖ್ಯೆಯೊಂದಿಗೆ ಬರುವಾಗ ಪನ್, ವನ್ (ಪಂಚಾ ವನ ) ಆಗಿ ಪರಿವರ್ತನೆ ಹೊಂದುವದು ಕಾಣಬಹುದು. ಪಾಂಚಹಜಾರ ಹೀಗೆ ಸಾವಿರದ ಸಂಖ್ಯೆಗಳಲ್ಲಿ ಮೂಲರೂಪ ಬಳಕೆ ಹೊಂದಿರುವುದು ಕಂಡುಬರುತ್ತದೆ. ಆದರೆ ನೂರರೊಂದಿಗೆ ಕೂಡುವಾಗ ಪಾನ್ ರೂಪ ಪಡೆಯುತ್ತದೆ. ಉಳಿದೆಲ್ಲ ಸ್ವತಂತ್ರ ರಚನೆಯುಳ್ಳ ಸಂಖ್ಯಾ ರೂಪಗಳು ನೂರರ ನಂತರ ಮೂಲ ರೂಪದಲ್ಲೆ ಉಚ್ಚರಣೆಯಾಗುತ್ತಿದ್ದು, ಈ ಸಂಖ್ಯೆ ಮಾತ್ರ ರೂಪ ಬದಲಾವಣೆ ಮಾಡಿಕೊಂಡಿದೆ.

**೬.೪.೬. ಸಹಾ (ಮರಾ), ಛೆ (ಉ)**

ಸ್ವೀಕೃತ ಸಂಖೆ ಸಹಾ , ಛೆ ಗಳು ಸ್ವತಂತ್ರ ರಚನೆ ಹೊಂದಿರುವ ಸಂಖ್ಯಾ ರೂಪಗಳಾಗಿವೆ. ಸಂಯುಕ್ತ ಸಂಖ್ಯೆಗಳೊಂದಿಗೆ ಕೂಡುವಾಗ

ಸೊ - ಸೊಳಾ (ಮ-ಉ)

ಸ - ಸವ್ವಿಸ (ಮ)

ಛ - ಛತ್ತಿಸ (ಮ-ಉ)

ಛಪನ್ನ (ಉ)

ಛಿಸಾಟ (ಉ)

ಛಿಹತ್ತರ (ಉ)

ಛಿಯಂಸಿ (ಉ)

ಛೆ - ಛೆಚಾಳ (ಮ)

ಛೆಬ್ಬಿಸ (ಉ)

ಛೆತ್ತಿಸ (ಉ)

ಛೆತ್ತಾಳಿಸ (ಉ)

ಛೆಸೊ (ಉ)

ಛಾ - ಛಾವನ (ಮ)

ಛಾನೌ (ಉ)

ಶಾಸ - ಶಾಸಸ್ಪ (ಉ)

ಶಾಣೌ (ಮ)

ಸಾಹ - ಸಾಹತ್ತರ (ಮ)

ಸಾಯಂಸಿ (ಮ)

ಸಹಾಸೊ (ಮ)

ಹೀಗೆ ಧ್ವನಿಮಾತ್ಮಕವಾಗಿ ವ್ಯತ್ಯಾಸಗಳು ಆಗುತ್ತವೆ. ನೂರು, ಸಾವಿರ ಸಂಖ್ಯೆಯೊಂದಿಗೆ ಮೂಲರೂಪದಲ್ಲೆ ಕೂಡುತ್ತದೆ. (ಛೆಹಜಾರ, ಸಾಹಜಾರ)

**೫.೪.೭ ಸಾತ್ (ಮರಾ-ಉ)**

ಸ್ವೀಕೃತ ಸಂಖ್ಯೆ ಸಾತ ವು ಸ್ವತಂತ್ರ ಸಂಖ್ಯಾ ರೂಪ ಹತ್ತರಿಂದ ಗುಣಿತವಾದ ಸಂಯುಕ್ತ ಸಂಖ್ಯಾ ಪದಗಳೊಂದಿಗೆ ಕೂಡಿದಾಗ ಈ ಕೆಳಗಿನಂತೆ ರೂಪ ಬದಲಾವಣೆಗೆ ಒಳಗಾಗುತ್ತದೆ.

ಸತ್ತ - ಸತ್ರಾಹ / ಸತ್ರಾ (ಮ-ಉ)

ಸತ್ತಿಸ (ಸಾತ+ತಿಸ) (ಉ)

ಸತ್ಯೆಂಸಿ (ಸತ+ಅಂಸಿ) (ಮ-ಉ)

ಸತಸಾಟ (ಉ)

ಸತ್ತಾ - ಸತ್ತಾವಿಸ (ಮ-ಉ)

ಸತ್ತಾವನ (ಮ-ಉ)

ಸತ್ತಾಳಿಸ (ಉ)

ಸತ್ಯ - ಸತ್ಯತ್ತರ (ಮ-ಉ)

ಸತ್ಯಣೌ (ಮ-ಉ)

ಸತ್ಯಸಸ್ವ (ಮ)

ಸದೊ - ಸದೊತಿಸ (ಮ)

ಸತ್ತೆ - ಸತ್ತೆಚಾಳ (ಮ)

ನೂರು ಸಾವಿರದ ಸಂಖ್ಯೆಯಲ್ಲಿ ಮೂಲರೂಪವೇ ಬಳಕೆಗೊಳ್ಳುತ್ತದೆ. ಮೇಲೆ ಉಲ್ಲೇಖವಾದ ಸಂಖ್ಯೆ ಸತ್ರಾಹದಲ್ಲಿ ಸತ್ತದಹ ಈ ರಚನೆ ಹೊಂದುವಾಗ ಸತ್ತರಲ್ಲಿನ ಸಜಾತಿ ದ್ವಿತ್ವಹೋಗಿ ವಿಜಾತಿ ದ್ವಿತ್ವ ಬರ್ತದೆ. ಸತ್ತ ಸತ್ತರ. ಈ ಸಂಖ್ಯೆ ಅನಿಷ್ಟವೆಂಬ ನಂಬಿಕೆ ಜನರಲ್ಲಿದೆ. ಇದೂ ಕನ್ನಡದ ಏಳಕ್ಕೂ ಅನ್ವಯಿಸುತ್ತದೆ. ಹೀಗಾಗಿ ಇದನ್ನು ಎಣಿಸುವಾಗ ಹೆಚ್ಚಲಿ ಯೆಂದು ಉಚ್ಛರಿಸುವುದನ್ನು ಗುಲಬರ್ಗಾ ಪರಿಸರದಲ್ಲಿ ಕಂಡುಬರುತ್ತದೆ.

**೫.೪.೮. ಆಟ್ (ಮರಾ-ಉ)**

ಸ್ವೀಕೃತ ಸಂಖ್ಯೆ ಆಟ್ ಹತ್ತರ ಸ್ಥಾನದಲ್ಲಿ ಅಂಸಿ, ಅಸ್ಸಿ ರೂಪ ಪಡೆಯುತ್ತದೆ. ಸಂಯಕ್ತ ಪದವಾಗುವಾಗ-

ಅಟ್ಠಾ - ಅಟ್ಠಾವಿಸ (ಮ-ಉ)

ಅಟ್ಠಾವನ (ಮ-ಉ)

ಅಡ - ಅಡತಿಸ (ಉ)

ಅಡತಾಳಿಸ (ಉ)

ಸಡಸಾಟ (ಮ-ಉ)

ಅಡೊ - ಅಡೊತ್ತಿಸ (ಮ)

ಅಟ್ಯಾ -ಅಟ್ಯಾತ್ತರ (ಮ-ಉ)

ಅಟ್ಯಾಣೌ (ಮ-ಉ)

ಆಟ - ಅಟ್ಯೆಂಸಿ (ಮ-ಉ)

ಅಟ್ಠೆ - ಅಟ್ಠೆಚಾಳ

ಈ ರೀತಿಯ ಧ್ವನಿಮಾತ್ಮಕ ವ್ಯತ್ಯಾಸಕ್ಕೊಳಗಾಗಿರುವುದು ಗುರುತಿಸಬಹುದು. ನೂರು, ಸಾವಿರ ಸಂಖ್ಯೆಗಳಲ್ಲಿ ಆಟ್ ಮೂಲ ರೂಪವೇ ಬಳಕೆಗೊಳ್ಳುತ್ತದೆ. ಆಟ ಸೆ (ಮ) ಆಟ ಸೊ (ಉ) ಆಟ ಹಜಾರ (ಮ-ಉ) ಇತ್ಯಾದಿ.

**೫.೪.೮ ನೌ (ಮರಾ-ಉ)**

ಕನ್ನಡದಲ್ಲಿ ಒಂಬತ್ತು ಸಂಖ್ಯೆಯ ಸಮಸ್ಯೆ ಒಂದಿಷ್ಟು ವಿವಾದಾತ್ಮಕವಾಗಿಯೇ ಇದೆ. ಮರಾಠಿ ಉರ್ದುವಿನಿಂದ ಬಂದ ಸಂಖ್ಯೆ ನೌ ದಲ್ಲಿಯೂ ದಶಮಾಂಶ ರೂಪಗಳನ್ನು ಕೂಡುವಲ್ಲಿ ಒಂದಿಷ್ಟು ಗೊಂದಲವಾದರು ಅರ್ಥ ಮಾತ್ರ ಸರಾಗವಾಗಿದೆ. ಇದು ಸಂಯುಕ್ತ ರೂಪವಾಗುವಾಗ ವಿಲೊಮ ಮಾದರಿಯಲ್ಲಿ ಸಂಯುಕ್ತವಾಗುತ್ತದೆ. ಮುಂದಿನ ಸಂಖ್ಯೆಗಿಂತ ಒಂದು ಕಡಿಮೆ ಎನ್ನುವ ಅರ್ಥದಲ್ಲಿ ಬಳಕೆಗೊಳ್ಳುತ್ತದೆ.

| ಮರಾಠಿ | ಉರ್ದು |
|---|---|
| ಎಕ್ಕೋಣಿಸ್ | ಉನ್ನಿಸ ವನ್ನಿಸ |
| ಎಕ್ಕೊನಾತಿಸ್ | ಉನ್ನತಿಸ ವನ್ನಿಸ |
| ಎಕ್ಕೊಣಚಾಳಿಸ್ | ಉನ್ನತಾಳಿಸ |
| ಎಕ್ಕೊಣಪನ್ನಾಸ್ | ಉನ್ನಸಾಟ |
| ಎಕ್ಕೊಣಸಾಟ | ಉನ್ನಹತ್ತಾರ |
| ಎಕ್ಕೊಣಸತ್ತರ | ಉನ್ನಅಂಶಿ |
| ಎಕ್ಕೊಣ ಅಂಶಿ | ಉನ್ನನವ್ವದ |
| ನೌವ್ಯಣೌ | ನೌವ್ಯಣೌ |

ಇಂತಹ ರಚನೆ ಹೊಂದುತ್ತದೆ. ತೊಂಬತ್ತೊಂಬತ್ತು ಸಂಖ್ಯೆ ಎರಡೂ ಭಾಷೆಯಿಂದ ಬಂದ ಪದಗಳಲ್ಲಿಯೂ ನೌವ್ಯಣೌ ಆಗಿದೆ. ಇಲ್ಲಿ ತೊಂಬತ್ತು+ಒಂಬತ್ತು ಆಗಿದೆ. ಆದರೆ ಉಳಿದೆಡೆಗಳಲ್ಲಿ ಒಂದು-ಇಪ್ಪತ್ತು, ಒಂದು- ಮೂವತ್ತು (ಒಂದು ಕಳೆ ಇಪ್ಪತ್ತು) ಹೀಗೆ ರಚನೆ ಹೊಂದಿದೆ. ಕನ್ನಡದ ತೊಂಬತ್ತು ಬಿಡಿಸಿದ ಕಠಿಣ ರಚನೆ ಹೊಂದಿದೆ. ನೂರು ಸಾವಿರದಲ್ಲಿ ಈ ಸಂಖ್ಯೆ ಮೂಲ ಉಚ್ಚಾರ ಉಳಿಸಿಕೊಂಡಿದೆ.

ಈ ಸ್ವೀಕೃತ ಸಂಖ್ಯಾ ಪದ ನೌ ಕನ್ನಡ ಪರಿಸರದಲ್ಲಿ ಸ್ವತಂತ್ರ ರಚನೆ ಹೊಂದಿರುವ ಸಂಖ್ಯಾಪದ, ವಿಲೋಮ ಪದ್ಧತಿಗೆ ಒಳಗಾಗುವ ಮತ್ತು ಅನುಲೋಮವಾಗುವ ಸಂಖ್ಯಾ ಈ ಎಲ್ಲಾ ಪಾತ್ರಗಳನ್ನು ನಿಭಾಯಿಸುತ್ತಿರುವ ಏಕೈಕ ಪದವಾಗಿದೆ. ಕನ್ನಡದ ಒಂಬತ್ತಕ್ಕೆ ಈ ಶಕ್ತಿ ಇಲ್ಲವೆಂದರೆ ತಪ್ಪಾಗಲಾರದು.

೫.೪.೧೦ ದಾಹ (ಮರಾ) ದಸ (ಉ)

ಸ್ವೀಕೃತ ಸಂಖ್ಯೆ ದಸ (ಉ), ದಾಹ್(ಮ)ಗಳು ಸ್ವತಂತ್ರ ರಚನೆಯುಳ್ಳ ಪದಗಳಾಗಿವೆ. ಇವನ್ನು ಒಂದರಿಂದ ಒಂಬತ್ತರವರೆಗಿನ ಸಂಖ್ಯೆಯೊಂದಿಗೆ ಗುಣಿಸಿ ಹೊಸ ಸಂಯುಕ್ತ ಪದಗಳನ್ನು ಪಡೆಯಲಾಗಿದೆ. (ಬಿಸ, ತಿಸ, ಚಾಲಿಸ.... ನವದ) ಇದು ಸ್ವತಂತ್ರ ಸಂಖ್ಯೆಯಿಂದ ಸಂಯುಕ್ತ ರಚನೆಯಾಗುವಾಗ ಧ್ವನಿಮಾತ್ಮಕವಾಗಿ ತನ್ನ ರೂಪದಲ್ಲಿ ಬದಲಾವಣೆಯಾಗುತ್ತದೆ. ಅದನ್ನ ಹೀಗೆ ಗುರುತಿಸಬಹುದು.

ಅಸ - ಬಿಸ (ಮ)

ವಿಸ (ಉ)

ತಿಸ (ಮ-ಉ)

ಚಾಲಿಸ (ಮ)

ಚಾಳಿಸ (ಉ)

ಪನ್ನಾಸ (ಮ-ಉ)

ಆಟ - ಸಾಟ (ಮ-ಉ)

ಅರ - ಸತ್ತರ (ಮ-ಉ)

ಅಸ್ಸಿ - ಐಂಸಿ (ಮ)

ಅಸ್ಸಿ (ಮ)

ಅದ - ನವದ (ಮ)

ಅದೊ - ನವದೊ (ಉ)

ಅಹ - ಅಕ್ರಹ ಗ್ಯಾರಹ, ಬಾರ... ಅಟ್ರಹ (ಮ ಉ)

ಈ ರೂಪ ಬದಲಾವಣೆಯನ್ನು ಕಾಣಬಹುದಾಗಿದೆ.

೩.೪.೧೧ ಸೌ (ಉ) ಸೆಂಬೊರ (ಮ)

ಇದು ಸ್ವತಂತ್ರ ರಚನೆ ಇರುವ ದೊಡ್ಡ ಸಂಖ್ಯೆ ಇದು ಸೊ , ಸೈ , ಈ ಎರಡು ರೂಪದಲ್ಲಿ ಉಚ್ಚರಣೆಗೊಳ್ಳುತ್ತದೆ.

### ೫.೪.೧೨ ಹಜಾರ (ಮರಾ-ಉ)

ಇದೂ ಕೂಡಾ ಸ್ವತಂತ್ರ ರಚನೆಯುಳ್ಳ ದೊಡ್ಡ ಸಂಖ್ಯೆಯಾಗಿದೆ. ಇದು ಸ್ವತಂತ್ರ ಸಂಖ್ಯೆ ಸಂಯುಕ್ತ ಸಂಖ್ಯೆಗಳೊಂದಿಗೆ ಕೂಡುವಾಗ ಯಾವುದೇ ರೂಪ ಬದಲಾವಣೆಗೆ ಒಳಗಾಗುವುದಿಲ್ಲ. ಈ ರೂಪಗಳಲ್ಲದೆ ಗುಲಬರ್ಗಾ ಕನ್ನಡವು ಇತರ ಕನ್ನಡ ಪ್ರಭೇದಗಳಂತೆ ಸಂಸ್ಕೃತ ಮೂಲದ ಲಾಕ, ಕೋಟಿ ಸಂಖ್ಯಾವಾಚಕಗಳನ್ನು ಸ್ವೀಕರಿಸಿಕೊಂಡಿದೆ.

ಅಧ್ಯಾಯ ಏಳು

# ಸಮಾರೋಪ

ಒಂದು ಭಾಷೆಯ ಪದಕೋಶದ ಬಗೆಗಿನ ಅಧ್ಯಯನ ಕಷ್ಟಕರವಾದದ್ದಾಗಿರುತ್ತದೆ. ಆ ಪದಗಳು ಆ ಭಾಷೆಯು ಕಟ್ಟಿಕೊಳ್ಳಬೇಕಾಗಿರುವ ನಿಯಮಗಳನ್ನು ನಿರ್ಧರಿಸುವಂಥವುಗಳಾಗಿರುತ್ತವೆ. ಧ್ವನಿಗಳಲ್ಲಿನ ನಿಯಮಗಳು ಪದಗಳಿಗೆ ಅವುಗಳ ರಚನೆ ಕಂಡುಕೊಳ್ಳಲು ಮೂಲವಾದರೆ, ಪದಗಳ ರಚನೆ ವಾಕ್ಯ ನಿರ್ಮಾಣಕ್ಕೆ ನಿಯಮ ರೂಪಿಸುವಂಥವುಗಳಾಗಿರುತ್ತವೆ. ಈ ಸಂಗತಿಗಳು ಇನ್ನಷ್ಟು ಗಟ್ಟಿಗೊಳ್ಳೊದು ಕನ್ನಡಕ್ಕೆ ಸ್ವೀಕರಣ ಮಾಡಿಕೊಂಡಿರುವ. ಪದಗಳಲ್ಲಾಗುತ್ತಿರುವ ವ್ಯತ್ಯಾಸಗಳೆಂದು, ಪ್ರತಿ ಭಾಷೆಗೂ ತನ್ನದೇ ಆದ ಒಂದು ರಚನೆಯ ನಿಮಯವಿರುತ್ತದೆ. ಆ ರಚನೆಯ ನಿಯಮ ಮೀರುವ ಪದಗಳು ಆ ಭಾಷೆಯಲ್ಲಿ ಸೃಷ್ಟಿಯಾಗಲಾರವು. ಅದರಿಂದಲೇ ಅನ್ಯ ಭಾಷೆಯಿಂದ ಬರುವ ಪದಗಳು ಮೂಲ ಭಾಷೆಯ ರಚನೆಯನ್ನು ಕಳೆದುಕೊಳ್ಳೋದು. ಹಾಗೆಂದ ಮಾತ್ರಕ್ಕೆ ಒಂದು ಭಾಷೆ ಹೊಸ ರಚನೆಗಳನ್ನು ಸೃಷ್ಟಿಸಿಕೊಳ್ಳಲಾರದು ಎನ್ನಲಾಗದು. ಹೊಸದಾಗಿ ರಚನೆಗೊಂಡ ನಿಯಮಗಳೂ ಕೂಡಾ ಈ ಭಾಷಿಕ ಪರಿಸರಕ್ಕೆ ಹೊಂದುವಂಥವುಗಳಾಗಿರುತ್ತವೆ. ಇಂದು ಕನ್ನಡದಲ್ಲಿ ಇಂಗ್ಲಿಷನಿಂದ ಬಂದ ಪದಗಳಿಗೆ ಕನ್ನಡ ಪ್ರತ್ಯಯಗಳನ್ನು ಬೇಕಾಬಿಟ್ಟಿಯಾಗಿ ಸೇರಿಸಲಾಗುತ್ತಿದೆ. ಈ ರೂಪಗಳು ಕನ್ನಡದಲ್ಲಿ ನೆಲೆ ನಿಲ್ಲುವುದು ಕಠಿಣ, ನೇಲೆ ನಿಂತರು ಒಂದು ಸಿಮೀತ ವರ್ಗ ದಲ್ಲಿ ಮಾತ್ರ ನೆಲೆನಿಲ್ಲಬಲವು. ಆಡುಮಾತಿಗಿಳಿಯುವುದು ಕಷ್ಟ.

ಪ್ರತಿಯೊಂದು ಭಾಷೆಯು ಸ್ವೀಕರಣ ಮಾಡಿಕೊಂಡಿರುತ್ತವೆ. ಈ ಸ್ವೀಕರಣ ಪ್ರಕ್ರಿಯೆ ಸಾರ್ವತ್ರಿಕ ವಾದವುಗಳು. ಹೀಗೆ ಕನ್ನಡವು ಸ್ವೀಕರಿಸಿಕೊಂಡಿರುವ ಮರಾಠಿ, ಉರ್ದು ಪದಗಳು ಇಂದು ಕನ್ನಡ ರಚನೆಗೆ ಹೊಂದಿಕೊಂಡಿವೆ. ಅವುಗಳು ತಮ್ಮಲ್ಲಿ ಮಾಡಿಕೊಂಡಿರುವ ಮಾರ್ಪಾಡುಗಳನ್ನು ಈ ಹಿಂದಿನ ಅಧ್ಯಯನಗಳಲ್ಲಿ ಸುದೀರ್ಘವಾಗಿ ಚರ್ಚಿಸಲಾಗಿದೆ. ಈ ಅಧ್ಯಯನದಲ್ಲಿ ಕಂಡ

ಫಲಿತಗಳನ್ನು ಈ ಹಿಂದಿನ ಅಧ್ಯಯನಗಳಲ್ಲೆ ವಿವರಿಸಿರುವುದರಿಂದ ಇಲ್ಲಿ ಪ್ರಾಸಂಗಿಕವಾಗಿ ಒಂದು ನೋಟ ಬೀರಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ, ಸ್ವರೂಪ ಮತ್ತು ವೈಧಾನಿಕತೆ ಗಳನ್ನು ಸ್ಪಷ್ಟಪಡಿಸಲಾಗಿದೆ. ವ್ಯಾಪ್ತಿ ನಿರ್ಧರಿಸಿ ಅದಕ್ಕೆ ತಕ್ಕಂತೆ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಇಡೀ ಅಧ್ಯಯನದ ಸ್ವರೂಪ ವಿವರಣೆಯನ್ನು ನೀಡಲಾಗಿದೆ.

ಅಧ್ಯಾಯ ಎರಡರಲ್ಲಿ ಅಧ್ಯಯನಕ್ಕೆ ಪೂರಕ ಮಾಹಿತಿಯಾಗಿ ಅಧ್ಯಯನಕ್ಕೆ ಆಯ್ದುಕೊಂಡಿರುವ ಕ್ಷೇತ್ರದ (ಗುಲಬರ್ಗಾ) ಪರಿಚಯ ಮಾಡಿಕೊಡಲಾಗಿದೆ. ಆ ಪರಿಸರದ ಕನ್ನಡ ಭಾಷೆಯ ಚಾರಿತ್ರಿಕ ಹಿನ್ನೆಲೆಯನ್ನು ಮೂಲ ದ್ರಾವಿಡದಿಂದ ಆಧುನಿಕ ಪ್ರಭೇದದವರೆಗೂ ಆದ ಬದಲಾವಣೆಗಳನ್ನು ಸುದೀರ್ಘವಾಗಿ ಚರ್ಚಿಸಲಾಗಿದೆ. ಇಲ್ಲಿ ಮೂಲ ದ್ರಾವಿಡ, ಮೂಲ ಕನ್ನಡ ಈ ಪರಿಕಲ್ಪನೆಗಳನ್ನು ಅವುಗಳ ಕಾಲ ಮತ್ತು ಆ ಕಾಲಕ್ಕೆ ಕನ್ನಡದ ಸ್ಥಿತಿ ಬಗ್ಗೆ ಭಾಷಿಕ ಅಂಶಗಳ ಉದಾಹರಣೆಗಳೊಂದಿಗೆ ವಿವರಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಸ್ವೀಕರಣ ನಾಮಪದಗಳನ್ನು ಅವುಗಳ ರಚನೆಗೆ ಅನುಗುಣವಾಗಿ ವಿಂಗಡಿಸಿ ಧ್ವನಿಮಾ, ಆಕೃತಿಮಾ, ಅರ್ಥದ ಹಂತ ಇಟ್ಟುಕೊಂಡು ಮಾಡಿಕೊಂಡ ರಾಚನಿಕ ಪಲ್ಲಟಗಳನ್ನು ದೀರ್ಘವಾಗಿ ವಿವರಿಸಲಾಗಿದೆ. ಧ್ವನಿಮಾ ಹಂತದಲ್ಲಿ ಪದಗಳನ್ನು ಧ್ವನಿಗನುಗುಣವಾಗಿ ವಿಭಾಗಿಸಿ ಅವುಗಳ ರಚನೆಯನ್ನು ವಿವರಿಸಲಾಗಿದೆ. ಹಾಗೆಯೇ ಆ ಪದಗಳಲ್ಲಿ ಧ್ವನಿ ಹಂತದಲ್ಲಾದ ರಾಚನಿಕ ಪಲ್ಲಟಗಳನ್ನು ಗುರುತಿಸಲಾಗಿದೆ. ಮತ್ತು ಅದು ಕನ್ನಡದಲ್ಲಾದ ಪಲ್ಲಟವೇ ಇಲ್ಲ ಈ ಪದಗಳು ಹೊಸ ಪಲ್ಲಟ ಮಾಡಿಕೊಳ್ಳುತ್ತಿವೆ ಎಂಬುದೆಲ್ಲವನ್ನು ವಿವರಿಸಲಾಗಿದೆ. ಆಕೃತಿಮಾ ಹಂತದಲ್ಲಿ ಅವುಗಳನ್ನು ರೂಢ, ಅನ್ವರ್ಥ, ಅಂಕಿತ ವರ್ಗಗಳಾಗಿ ವಿಭಾಗಿಸಿ ನೀಡಲಾಗಿದೆ. ಪದಗಳು ಕೂಡುವಾಗ ನಿರ್ಮಾಣವಾಗುತ್ತಿರುವ ನಿಯಮಗಳನ್ನು ವಿವರಿಸಲಾಗಿದೆ. ಅಂದರೆ ಪದಗಳು ಕೂಡುವ ಸ್ವರೂಪವೇನು(ಮೂಲ+ಮೂಲ ಕನ್ನಡ+ಮೂಲ, ಮೂಲ+ಕನ್ನಡ) ಎಂಬುದನ್ನು ವಿವರಿಸಲಾಗಿದೆ. ಈ ಪದಗಳ ಅರ್ಥ ಭಿನ್ನತೆ ಪಡೆದುಕೊಳ್ಳುವುದನ್ನು ಉದಾಹರಣೆಗಳೊಂದಿಗೆ ವಿವರಿಸಲಾಗಿದೆ. ಮೂಲದ ಅರ್ಥ ಕನ್ನಡಕ್ಕೆ ಬರುವಾಗ ಪಡೆದುಕೊಂಡ ಅರ್ಥ ಇವೆಲ್ಲವನ್ನು ಸೂಕ್ಷ್ಮವಾಗಿ ಗಮನಿಸಲಾಗಿದೆ. ಅಧ್ಯಾಯವು ಸ್ವೀಕರಣ ನಾಮಪದಗಳ ಸ್ಥೂಲ ಚಿತ್ರಣ ನೀಡಬಲ್ಲದಾಗಿದೆ.

ಅಧ್ಯಾಯ ನಾಲ್ಕರಲ್ಲಿ ಸ್ವೀಕರಣ ಗುಣವಾಚಕಗಳ ವಿವರಣೆ ನೀಡಲಾಗಿದೆ. ಇಲ್ಲಿ ಗುಣವಾಚಕ ಗಳನ್ನು ಧ್ವನಿಗನುಗುಣವಾಗಿ ವಿಂಗಡಿಸಿ ಅವುಗಳ ರಚನೆಯನ್ನು ವಿವರಿಸಲಾಗಿದೆ. ಗುಣವಾಚಕಗಳಲ್ಲಾದ ಧ್ವನಿ ಬದಲಾವಣೆಯನ್ನು ವಿವರಿಸಲಾಗಿದೆ. ಆಕೃತಿಮಾ ಹಂತದಲ್ಲಿ ಆ ಪದಗಳು ಪ್ರತಿನಿಧಿಸುವ ವರ್ಗಗಳಿಗನುಗುಣವಾಗಿ ಅವು ವರ್ಣಿಸುವ ಗುಣಗಳನ್ನು ಪಟ್ಟಿ ಮಾಡಲಾಗಿದೆ. ಅದಕ್ಕೆ ನಿದರ್ಶನ ನೀಡಿ ಪಟ್ಟಿಯಲ್ಲಿರುವ ವಿಚಾರ ಖಚಿತಪಡಿಸಲಾಗಿದೆ.

ಅಧ್ಯಾಯ ಐದರಲ್ಲಿಯ ಪದಗಳನ್ನು ಧ್ವನಿಗನುಗಣವಾಗಿ ಒಡೆದು ವಿಂಗಡಿಸಲಾಗಿದೆ. ಇಲ್ಲಿ ಕನ್ನಡ ಕ್ರಿಯಾಪದಗಳ ರಚನೆಗಿಂತ ಸ್ವೀಕರಣ ಪದಗಳ ಕ್ರಿಯಾಪದ ರಚನೆ ಹೇಗೆ ಭಿನ್ನವಾಗಿದೆ ಎನ್ನುವುದನ್ನು ತೋರಿಸಿ ಕೊಡಲಾಗಿದೆ. ಆಕೃತಿಮಾ ಹಂತಕ್ಕೆ ಬಂದಾಗ ಅವು ಕನ್ನಡ ಪ್ರತ್ಯಯ, ಕ್ರಿಯಾಧಾತುಗಳನ್ನು ಹೇಗೆ ಬಳಸಿಕೊಂಡಿದೆ ಎನ್ನುವುದನ್ನು ವಿವರವಾಗಿ ವಿವರಿಸಲಾಗಿದೆ.

ಅಧ್ಯಾಯ ಆರರಲ್ಲಿ ಸ್ವೀಕರಣ ಸಂಖ್ಯಾವಾಚಕಗಳನ್ನು ವಿವರಿಸಲಾಗಿದೆ. ಇಲ್ಲಿ ಸ್ವತಂತ್ರ ಸಂಖ್ಯೆಗಳು ಸಂಯುಕ್ತವಾಗುವಾಗ ಪಡೆಯುತ್ತಿರುವ ರೂಪ ವಿಶ್ಲೇಷಣೆ ಮಾಡಲಾಗಿದೆ. ಪ್ರತಿಯೊಂದು ಸಂಖ್ಯೆಯನ್ನು ಅದರ ರಚನೆಯನ್ನು ನಿದರ್ಶನ ನೀಡುವದರೊಂದಿಗೆ ವಿವರಿಸಲಾಗಿದೆ. ಈ ಸಂಖ್ಯಾವಾಚಕಗಳು ಕನ್ನಡ ಸಂಖ್ಯಾವಾಚಕಗಳಿಗಿಂತ ತುಂಬಾ ವೈರುಧ್ಯದ ರಚನೆ ಹೊಂದಿರುವವು ಗಳಾಗಿವೆ. ಇವುಗಳ ವಿವರಣೆ ಅಧ್ಯಯನದ ಮಹತ್ವದ ವಿಷಯಗಳೊಂದಾಗಿದೆ.

ಅಧ್ಯಾಯ ಏಳು ಇದು ಸಮಾರೋಪ ಭಾಗವಾಗಿರುವುದರಿಂದ ಇಲ್ಲಿ ಮೊದಲ ಅಧ್ಯಾಯದಿಂದ ಕೊನೆಯ ಅಧ್ಯಾಯದವರೆಗಿನ ಅಧ್ಯಯನದ ಸ್ವರೂಪ ವಿವರಿಸಲಾಗಿದೆ. ಅಧ್ಯಯನದ ಕೊನೆಯಲ್ಲಿ ಆಕರಗ್ರಂಥ, ಅನುಬಂಧಗಳನ್ನು ನೀಡಿ ಋಣಸ್ಮರಣೆ ಮಾಡಲಾಗಿದೆ.

ಈ ಅಧ್ಯಯನದಲ್ಲಿ ಕೆಲವು ಫಲಿತಗಳನ್ನು ಕಂಡುಕೊಳ್ಳಲಾಗಿದೆ. ಅವುಗಳನ್ನು ಕೆಳಗಿನಂತೆ ವಿವರಿಸಬಹುದು. ಈ ಹಿಂದೆ ಕನ್ನಡ ವಿದ್ವಾಂಸರು ವಿವರಿಸಿರುವ ಸ್ವೀಕರಣ ಪದಗಳ ಸ್ವರೂಪಕ್ಕೂ ಮರಾಠಿ, ಉರ್ದು ಪದಗಳ ಸ್ವರೂಪಕ್ಕೂ ಯಾವುದೆ ಸಾಮ್ಯತೆ ಇಲ್ಲ. ಆ ರಚನೆ ಮೀರಿದ ನೂರಾರು ಪದಗಳು ಕನ್ನಡ ಪರಿಸರ ಸ್ವೀಕರಿಸಿದೆ. ಈ ಹೊತ್ತಿಗೆ ಸ್ವೀಕರಣ ತಂತ್ರಗಳನ್ನು ಗುಲಬರ್ಗಾ ಕನ್ನಡಕ್ಕೆ ಅನ್ವಯಿಸಿ ನೋಡಿದರೆ ವಿರುದ್ಧ ಉತ್ತರ ಬರಬಲ್ಲವು.

ಸ್ವೀಕರಣ ನಾಮಪದಗಳೆಲ್ಲ ಕನ್ನಡ ಪದಗಳ ರಚನೆಗೆ ಬದಲಾಗಿದೆ.

ಸ್ವೀಕರಣ ಕ್ರಿಯಾಪದಗಳು ತಮ್ಮ ನೇರ ಕ್ರಿಯಾ ಸೂಚಕ ಗುಣವನ್ನು ಕಳೆದುಕೊಂಡಿವೆ. ಮೂಲ ನಾಮಪದ, ಕ್ರಿಯಾಪದಗಳನ್ನು ಕನ್ನಡ ಪ್ರತ್ಯಯ, ಕ್ರಿಯಾಧಾತು ಸೇರಿಸಿ ಕ್ರಿಯಾಪದ ನಿರ್ಮಾಣ ಮಾಡಲಾಗುತ್ತಿದೆ.

ಸಾವಿರಾರು ವರ್ಷಗಳಿಂದ ಗುಲಬರ್ಗಾ ಪರಿಸರದಲ್ಲಿ ಬಳಕೆಯಲ್ಲಿರುವ ಸಂಖ್ಯಾವಾಚಕಗಳು ಕನ್ನಡ ರಚನೆಗೆ ಬದಲಾಗದೆ ಮೂಲ ಸ್ವರೂಪದಲ್ಲಿಯೇ ಬಳಕೆಗೊಳುತ್ತಿವೆ. ಕನ್ನಡ ಪದಗಳೊಂದಿಗೆ ನಾಮಪದಗಳಾಗಿ ಬರುವಾಗಲು ಅವುಗಳ ರಚನೆಯಲ್ಲಿ ಬದಲಾವಣೆಗಳಾಗುವುದಿಲ್ಲ.

ಇಂತಹ ವಿಶೇಷ ಅಂಶಗಳನ್ನು ಸ್ವೀಕರಣ ಪದಗಳಲ್ಲಿ ಗುರುತಿಸಬಹುದಾಗಿದೆ. ಈ ಅಧ್ಯಯನವು ಮಾಹಿತಿ ಆಧಾರಿತವಾಗಿ ಅವುಗಳ ಸ್ವರೂಪದ ಮೇಲೆ ಆದದ್ದಾಗಿದ್ದು, ಇಲ್ಲಿ ಯಾವುದೇ ಉತ್ಪ್ರೇಕ್ಷೆಯ

ಪ್ರಮೇಯವಿಲ್ಲವೆಂದು ದೃಢೀಕರಿಸುತ್ತೇನೆ. ಈ ಅಧ್ಯಯನವು ಗುಲಬರ್ಗಾ ಕನ್ನಡದ ಜನರ ಆಡು ನುಡಿಗಳನ್ನು ಅಧ್ಯಯನಕೊಳ್ಳಪಡಿಸಿಕೊಂಡಿದೆ. ಇಲ್ಲಿ ವಿವರಿಸಿರುವ ಸಂಗತಿಗಳು ಬರಿ ಗುಲಬರ್ಗಾ ಪ್ರದೇಶಕಷ್ಟೇ ಸೀಮಿತವಾಗಿರದೆ ಇಂಥದ್ದೆ ರಚನೆಗಳು ಇತರೆಡೆಗೂ ಇರುವ ಸಾಧ್ಯತೆ ಇದೆ. ಇದು ಗುಲಬರ್ಗಾ ಪರಿಸರದ ಸ್ವೀಕರಣ ಪದಗಳ ವರ್ಣಾನಾತ್ಮಕ ವಿವರಣೆ ಆಗಿದ್ದು ಪ್ರಾಥಮಿಕ ಅಧ್ಯಯನ ವಾಗಿದೆ. ಇದು ಮುಂದಿನ ಅಧ್ಯಯನಕ್ಕೆ ಆಕರವಾಗಬಲ್ಲದೆಂದು ಈ ಅಧ್ಯಯನದ ಆಶಯವಾಗಿದೆ.

# ಅನುಬಂಧಗಳು

## ಪದಗಳು

**ಮರಾಠಿ ಪದಗಳು**

ಅಕ್ಲ
ಅಗದಿ
ಅಜಾಬಾದ
ಅಟಕಾವ
ಅಟಗಾವ
ಅಟಕಾಸು
ಅಟಾಪ
ಅಡಚಣಿ
ಅಡತಿ
ಅಡಸಟ್ಟಿ
ಅಜಿವಾನ
ಅಟಕಾಸು
ಅಚಾನಾಕ
ಅಚ್ಚಾವುಚ್ಚ
ಅಡಮುಟ
ಅದಲಿಬದಲಿ
ಅಪುಟ
ಅವಡಾಸವಡಾ
ಅಬುಳಚಬುಳ
ಅಖರೀ
ಅಜುಬಾಜು
ಅಣೆ
ಅಬರ
ಆಸಪಾಸ
ಆಯಾರಿ

–ಇಯತಿ
ಇನಾಮತಿ
ಇಮಾರತ್ತು
ಇರಾದೆ
ಇಲೆಚಿ
ಉಜಾಡ
ಉಡಾಳ
ಉತಾರು
ಉದ್ರಿ
ಉಧೋ
ಉಪರಾಟೆ/ ಉಪರಾಟಿ
ಉಲ್ಪಾ
ಉಸಾಬರಿ
ಉಲ್ಪಿ
ಊಭಾರ
ಏಕತಾರಿ
ಐಟು
ಐನಾತಿ
ಐನ
ಐಬ
ಐಸಾರಾಮಿ
ಕಂಗಾಲ
ಕಂಜುಸ
ಕಚೋರಿ
ಕಜ್ಜಾಳಿ
ಕಟಾಕಟಿ

ಕಟಕಟ
ಕಡ್ಯ / ಖಡ್ಯಾ
ಕಡಕ
ಕಡಚಿ
ಕಣ
ಕಮ್ಮ
ಕರಾರ
ಕರಾರಪತ್ರ
ಕರ್ಚ
ಕಲಂಗಡಿ
ಕಾಟಗಾಯಿ
ಕಾಟ
ಕಾಟಾ
ಕಾರಬಾರಿ
ಕಾಳಜಿ
ಕಿರಾಣಿ
ಕಿಮತ್ತ
ಕಟಪಿಟಿ
ಕಿಲಾಡಿ / ಖಿಲಾಡಿ
ಕಿಲ್ಲಾ / ಖಿಲ್ಲಾ
ಕಿಸೆ / ಕಿಶ್ಯಾ
ಕುರುಡುಗಿ / ಕುರುಡ್ಗಿ
ಕೈಮಾ
ಕೋಠ
ಕಾರಿಖ / ಬಾರಿಖಾ
ಕೆಟ್ಬಚಾಳಿ

ಖಜ್ಜುರಿ
ಖಟಾರಾ
ಖಟಂತ
ಖಟ್ಪ
ಖಡತರ
ಖಡಾಖಡಿ
ಖಡಿ
ಖಡು
ಖರೀದಿ / ಕರಿಧಿವಿ
ಖರೇ
ಖವಳುಸು
ಖಾನಾವಳಿ
ಖಾಸಗಿ
ಖವಾ
ಖಾಸಗತ
ಖುಬಿ / ಖುಬ
ಖಂಯಿ
ಖೂನ
ಗಂಟಿಚೌಡಿ
ಗಚ್ಚು
ಗಚಗಿ
ಗಚಕನೆ
ಗಚಾಗು
ಗಡುಪ
ಗದಾಡಿ
ಗರ್ದಿ

ಗದಾಡು
ಗಮ್ಮತ್ತು
ಗಿರಕಿ
ಗಿರಣಿ
ಗಿರಾಕಿ
ಗುಂಗ
ಗೊಂಗಡಿ
ಗೋಂಡಾಳಿ
ಗೋಂದಲ
ಗೊಂದಲಿಗ
ಗೋರಗರಿಬ
ಗೌಂಡಿ
ಗಪಚಿಪ
ಗೌಂವಟಾಣ
ಘಾಣ
ಚರಕಿ
ಚವಳಿಕಾಯಿ
ಚವುಕಾಸಿ
ಚೌಪಾನಿ
ಚಾಳಿ
ಚೌಕಾ
ಚಿಂದಿ
ಚಿಂದಟಿ
ಚಿವುಡಾ
ಚುಂಗಡಿ
ಚುಡಾಸು
ಚುರುಮರಿ
ಚೌರಸ್ತಾ
ಛಪಾಸು
ಛಾತಿ

ಜಂಗಿ
ಜಂಗಿಕುಸ್ತಿ
ಜಪ್ತಿ
ಜಟಗಿ / ಝುಟಗಿ
ಜಟಕಾಸು
ಜಂಗು
ಜಪ್ಪುಸು / ಜಪ್ಪಸಿ
ಜಾಗಿರದಾರ
ಜಾಪಾಳಕಾಯಿ
ಜಾಗಾ
ಜೊಲಿ
ಜೊಲಿಹೊಡಿ
ಜಾಬಾದ
ಜಾವಳ
ಜೇಪರಿ / ಝಿಪರಿ
ಜುಮಕಿ
ಜಲಾಬ
ಟಿಕಾಣಿ / ಠಿಕಾಣಿ
ಟಿಕಾಸು
ಟೋಪಿ
ಟಾಕಿ
ಟಾಚಣಿ
ಟಿಮ್ಮು
ಟಿಕಳಿ
ಝುಗಾ
ಝುಕಾಸಿ
ಝುಕುಸ್ತ
ಜಾಗರಾಣಿ
ಝುರಿ / ಜಾರಿ
ಠರಾವು

ಠಸಿಗೆ
ಠಿಕಠಾಕ
ಠಿಕಾಣಿ
ಠೇವಣಿ
ಠೋಕ
ಡಗುಳ
ಡಬ್ಬಣ
ಡುಗುಡುಗಿ
ಡುಬರಿ
ಡುಮಕಿ
ಡರಕಿ
ಡಾಂವ
ಡೋಲಿ
ತತರಾಣಿ
ತಪಾಸ
ತಲಾಟಿ
ತಪರಾಕಿ
ತಾಂಡಾ / ಥಾಂಡಾ
ತಾಡಪತ್ರಿ
ತಾಬಡತೊಬಡ
ತಿರಾಸಟಿ
ತುಕಡಿ
ತುಪಾನ
ತೇಜ
ಥಕಾಸು
ಥರಾಸು
ಥಾಟ
ಥೆಟ್
ಧಂಗಾಮುಸ್ತಿ
ದಗಲಬಾಜಿ

ದೇಣಿಗಿ
ದಿವಾನಿ
ದಿವಾಳಿ
ದುಕಾನ
ದುನ್ಯಾದ
ದೊಮಜಲ್
ದುದಪೇಡಾ
ದೇಣ್ಯಾ
ದೇಶಮುಖ
ಧುಂದಾಂ
ದುರಮಂಜಿ
ದೇಶಾವಕರ
ದೇಸಾಯಿ
ದೌಡು
ದೌಡೋಡು
ಧಬಧಬಿ
ಧಮಕಿ
ಧಸಗಿ
ಧಗಿ
ಧಾಪ
ಧಾಡಿ
ಧಡಪುಡ
ಧಾಂವ
ಧಾಂವತಿ
ಧೋತ್ರ
ನಳಾ
ನಾಕಾ
ನಾಕಾಬಂದಿ
ನಾಜುಕ
ನಿಗರಾಣಿ

ನಿಗಾ
ನ್ಯಾರಿ
ನೊಂದಣಿಮಾಡು
ನಿವಾಂತ
ನಿವಾಡ
ಫಟಿಂಗ
ಪರಾತ
ಪಕಳಾ
ಪಟಾಸು
ಪತ್ತಲ
ಪಲ್ಪಿ
ಪಾಣಿ
ಪಾವಬಂದ
ಪಾಂಚವರಿ
ಪಾನಪಟ್ಟಿ
ಪಾವಡ
ಪುಗಸಟೆ / ಪುಕ್ಕಟೆ
ಪುರಾಟ
ಪ್ಯಾಂಟನಾಗಿ
ಪಾವ್
ಪಾವಣೆ
ಪಾವಣ್ಯ
ಪಿಸವಿ
ಪತ್ತ
ಪನ್ನಾ
ಪಾನಾ
ಪುಂಗಿ
ಪುಡಾರಿ
ಪುಟಾಣಿ
ಪೈವಸ್ತಿ
ಫರಸಿ
ಫಸಾಸು
ಫಾಜ್ಜಾ
ಫಾಳಿ
ಫೀರತಿ
ಬಾಂಡವಾಲ
ಬಾಹದ್ದೂರಗಡಿ
ಬಾಜಾರಭಾವ
ಭಾವಜಿ
ಬಾವುಗ
ಬಿಲ್ಲಾರ
ಬೀಡಾರ
ಬೇವರ್ಸಿ
ಭೊಗೋಣಿ
ಬೊರಮಾಳ
ಬಾವಾಸಾಬ
ಬಾರಿಕ
ಬಾಸುಂಡಿ
ಬಂಬಳ
ಬಾವಾ
ಬೀಡ
ಬುಕಣಿ
ಬುಕ್ಕಾ
ಬೋಣಗಿ
ಭರಾಟೆ
ಭಮಟಿ
ಭರೊಸಾ
ಭಲೆ
ಭಾಂಡೆ
ಭೋಂಗಾ
ಭಾಡ್ಯಾ
ಮಕರಾ
ಮಡಸ
ಮಜಬೂತ
ಮಸಾರಿ
ಮಾವಸಿ
ಮುರುಮ್ಮ
ಮೋಜಣಿ
ಮೋರಿ
ರಗಟಿ
ರಾಡಿ
ಲಟಾಸು
ಲತಾಡಿ
ಲವಲವ
ಲಿಗಾಡ
ಲುಟಿ ಲೂಟಿ
ಲುಟಾಸು
ಲೂಟಿಆಗು
ವಸೂಲಿ
ವಟಗಾ
ವಟಾಳಿ
ವೈನಿ
ವೈವಾಟ
ಶೌಕ
ಸಗಟ
ಸರಾಸಿ
ಸವಡ
ಸವ್ವಾ
ಸೌಕಳಿ
ಸಾಗವಾನಿ
ಸಳ್ಳೈ
ಸಾಡೆ
ಸಾವಕಾರ
ಸೂಟಿ
ಸ್ವಾಯಿ
ಹಕನಾಕ
ಹಕಾರಿ
ಹಜಾರ
ಹಪ್ಯಾಪಿ
ಹಮಾಲಿ
ಹರಾಜ
ಹನ್ನಹುನಾರ
ಹಲ್ಕಟ
ಹುಂಡಾ
ಹುಡದಿ
ಹುರಹುರು

## ಉರ್ದು ಪದಗಳು

ಅಂಗೂರ
ಅಂಜುರ
ಅಂದಾಜ
ಅಗಾವ
ಅಜಿವಾನ
ಅನಾಜ
ಅನಾಮತ್ತ
ಅಮರಾಯಿ
ಅಮಿನ
ಅವಾಜ
ಆಪಾಸ್
ಆರಾಮ
ಆಸಾಮಿ
ಇರಾದೆ
ಇರಾಜ
ಇಸಾರಾ
ಉಡಾಸ
ಉಟಾಬೈಸ / ಬೈಟ
ಊಧ
ಏಕಸಾ
ಏಕಾತರಿ
ಕಚ್ಚಾ
ಕಟಾಯಿ
ಕಟೋರಿ
ಕಟಮಸ್ತ
ಕಬಾಬ
ಕಮಾನ
ಕಮಾಯಿ
ಕಮಾಸಿ

ಕಮಾಲ
ಕಾಯಿದೆ
ಕಿತಾಪತಿ
ಕಿಲಾಡಿ / ಖಿಲಾಡಿ
ಕುಂಚಿ
ಕುನ್ನಸ
ಕುರಬಾನಿ
ಕುಲಾಸು / ಖುಲಾಸು
ಖಡಿ
ಖ್ಯಾಲ
ಖಾತರಿ
ಖಾತೆ
ಖಾಸಾ
ಖುಲ್ಲಾ
ಖಾಡಿ
ಖೋಟಿ
ಗಂಜ
ಗಜಲ್
ಗಟಾರ
ಗಡುಪ್
ಗಪ್ಪ
ಗಬ್ರು
ಗರಮ
ಗರು
ಗಲ್ಲಾ
ಗಲ್ಲಿ
ಗಾಂಡು
ಗಾಂಜಾ
ಗಾಡಿ

ಗಾದಿ
ಗಾಬರಿ
ಗೊದಾಮ
ಗುಮ್ಮಟ
ಗೈರಿ
ಘೇರಾವ
ಗಪ್ಪನೆ
ಗರ್ಮಿ
ಗೂಗ್ಗ
ಘೊಟಾಳಿ
ಚಕಮಕಿ
ಚಕ್ಕರ
ಚಟಾಕ / ಛಟಾಕ
ಚಡಾವ
ಚಪರಾಸಿ
ಚಮಕ
ಚಿಮುಟ್ಗಿ
ಚಮಡಾ
ಚಪ್ಪಲ
ಚಪಾತಿ
ಚೊಟ್ಯಾ
ಚಾಲು
ಚಿಪಾಟಿ
ಚಾವಿ
ಚಿಟಕಾಸು
ಚುಕ್ತಾ
ಚೆಲಾ
ಚೈನಿ
ಚೌಕ

ಛಾಪಾ
ಜಂಗಲಿ
ಜರ್ರನೆ
ಜರತಾರಿ
ಜರೂರಿ
ಜಲ್ದಿ
ಜಾಸ್ತಿ
ಜುಕಾಸು
ಝುಪಾಟಿ
ಛತ್ತ
ಛಾತಿ
ಡಬ್ಬಾ
ತಾಯಿತ
ತಾಬೆದಾಗ
ತುರಂತ
ಡಾಂವ
ಡುಮಕಿ
ಡೋಂಗಿ
ಥೈಲಿ
ದಬಾಸಿ
ದಾಮ
ದೇಖರಕಿ
ಧಕ್ಕಾಮುಕ್ಕಿ
ಧಂದ್ಯಾ
ತಿಜೋರಿ
ತೋಡೆ
ಧರಣಿ
ಧಾಕ
ಧಾಂದಲಿ

| | | | |
|---|---|---|---|
| ನಾಲಾ | ಬಡಾಸು | ಭರಿಸು | ಶೇಕಡಾ |
| ನಿಭಾಸು | ಬದಲಿ | ಭಾನಾಮತಿ | ಸಂಡಾಸ |
| ಪಂಚನಾಮಾ | ಬನಾವಟಿ | ಭರೋಸಾ | ಸಮಜಾಸಿ |
| ಪಂಚಾಯಿತಿ | ಬರಾಬರಿ | ಮೊರಿ | ಸಾಡೆಸತ್ತಿ |
| ಪಂಚಾತಿ | ಬಟಾಯಿ | ರಬಟಿ | ಸಸ್ತಾ |
| ಪಕ್ಕಾ | ಬಡಕಾಸು | ರಪಾಟೆ | ಸಳೈ |
| ಫರಾಕ | ಬಿದಾಯಿ | ರೊಕಡಾ | ಸತಾಸು |
| ಪರಾತ | ಬಾಜಾರಿ | ರಾಂಡಬಾಜ | ಸಿದಾಸಾದಾ |
| ಪಾವತಿ | ಬಾದಲಿ | ಲಂಗಡ್ಯಾ | ಸೂಟಿ |
| ಪಾಸಂಗ | ಬಾರದಾನಿ | ಲಗಾಸು | ಸೇರು / ಶೇರು |
| ಪುಕಾರ | ಬಿಗಡಾಸು | ಲಗಾವು | ಹಜಾಮತ |
| ಪುಸಲತ | ಬಿಲ್ಲಾ | ಲಡಿ | ಹರಾಮ |
| ಪೌಂಚಾಸು | ಬೀಡಾ | ಲಾವಣಿ | ಹಲ್ಕಾ |
| ಪಕಳಾ | ಬೈರಕ | ಲೂಟಿ | ಹೌದು |
| ಬಚಾವ | ಭರ್ತಿ | ಲಿಖಾವಟ | |
| ಬಡಾಯಿ | ಭರಪೂರ | ಲತಾಡಿ | |

## ನಾಮಪದಗಳು

| **ಮರಾಠಿ** | ಆಸಪಾಸ | ಕಂಜಸ | ಕಿಮತ್ತ |
|---|---|---|---|
| ಅಕರಾಳ ವಿಕರಾಳ | ಆಯಾರಿ | ಕಚೋರಿ | ಕಿಶ್ಯ |
| ಅಕ್ಕುಲ | ಇಮಾರತ | ಕಟಕಟಿ | ಕಿಲ್ಯಾ / ಖುಲ್ಯಾ |
| ಅಟಕಾವ | ಇಲೆಚಿ | ಕರಾರ | ಕುರುಡ್ಗಿ |
| ಅಡಚಣ | ಕಚೇರಿ | ಕರ್ಚ / ಖರ್ಚು | ಕೈಮಾ / ಖೈಮಾ |
| ಅಡಸಟ್ಟಿ | ಉದ್ರಿ | ಕಾಳಜಿ | ಖಂಡಗುತ್ತಿ |
| ಅದಲಿಬದಲಿ | ಉಲ್ಪಾ | ಕಾಟಾ | ಖಜ್ಜುರಿ |
| ಅವಡಾಸವಡಾ | ಉಪರಾಟೆ | ಕಾಟ | ಖಟ್ಕ |
| ಆಖರೀ | ಏಕಟ | ಕಾರಬಾರಿ | ಖಡಾಖಡಿ |
| ಆಜುಬಾಜು | ಎಕತಾರಿ | ಕಾಳಜಿ | ಖಡಿ |
| ಆಣೆ | ಐಬ | ಕಿತಾಪತಿ | ಖಡ |
| ಅಬುರು | ಐನ | ಕಿರಾಣಿ | ಖರಿದಿ |

ಖರೆ
ಖಂಡುಗ
ಖಾನವಳಿ
ಖವಾ
ಖಾಸಗತ
ಖುಬ
ಖೋಡಿ
ಖಂಯಿ
ಖಾಡಿ
ಗಚ್ಚು
ಗಂಟಿಚೌಡಿ
ಕದಾಡಿ
ಗಂಜ
ಗೌಂವಟಾಣ
ಗಿರಣಿ
ಗಿರಾಕಿ
ಗೂಗ್ಗು
ಗೋಂದಡಿ
ಗೊಂಡಾಳಿ
ಗೊಂದುಲ
ಗೋರಗರಿಬ
ಗೌಂಡಿ
ಚರಕಿ
ಚಾವಳಿಕಾಯಿ
ಚಾಪಾಣಿ
ಚಾಳಿ
ಚಿಂದಿ
ಚಿವುಡಾ
ಚುಂಗಡಿ
ಜಜಿಂಜಡ

ಜಪ್ತಿ
ಜಟಗಿ
ಜಾಗಿರಾದರ
ಜಾಪಾಳಕಾಯಿ
ಜಿಪರಿ
ಜುಮಕಿ
ಜುಲಾಬ
ಝುಗಾ
ಜ್ವಾಕಿ
ಟಿಕಾಣಿ
ಟೋಪಿ
ಠರಾವ
ಠಸಗಿ
ಠಿಕಠಾಕ
ಠೇವಣಿ
ಠೊಕ
ಡರಕಿ
ಡಗುಳ
ತತ್ರಾಣಿ
ತಪಾಸ
ತಲಾಟಿ
ತಾಂಡಾ
ತಾಕಿತ
ತಾಡಪತ್ರಿ
ತುಕಡಿ
ತುಪಾನ್
ತೇಜಿ
ಥಾಟ
ದಂಗಾಮುಸ್ತಿ
ದೇಣಗಿ

ದಿವಾಳಿ
ದುಕಾನ
ದುದಪೇಡಾ
ತೆಜಿ
ದೇಶಮುಖ
ದುರಮುಂಜಿ
ದೇಶಾವರ
ದೇಸಾಯಿ
ಧಮಕಿ
ಧಸಗಿ
ದಾಡಿ
ಧಾಮ್‌ಧೂಮ
ಧಾಂವ
ಧಾವಂತಿ
ಧೋತ್ರ
ಧೋತುರ
ನಾಕಾಬಂದಿ
ನಾಜುಕ
ನಾಷ್ಟ
ನಾಕ್ಕಾ
ನಿಗರಾಣಿ
ನಿಗಾ
ನಿವಾಡ
ನೋಂದಣಿ
ಪಟಂಗ
ಪಾಂಚವರಿ
ಪಾನಪಟ್ಟಿ
ಪಾವಡ
ಪುಗಸಟ್ಟೆ
ಪುಕ್ಕಟೆ

ಪುಟಾಣಿ
ಪಾರಾಟ
ಪೈವಸ್ತಿ
ಪೋರಿ
ಫರಸಿ
ಫಾಳಿ
ಫಿರತಿ
ಬಾಂಡೊಲ
ಬಾದ್ದುರ
ಬಾಜಾರ
ಬಾಕಿ
ಬಾವ
ಭಾವಜಿ
ಬಾವುಗ
ಬಿಲ್ವಾರ
ಬೀಡಾರ
ಬೆವರ್ಸಿ
ಬೋಗೋಣಿ
ಬೊರಮಾಳ
ಭರಾಟಿ
ಭಮಟಿ
ಭರಡಾ
ಭಾಂಡ್ಯಾ
ಮುರುಮ್ಮ
ಮೋಜಣಿ
ರಗಟಿ
ರಾಡಿ
ವಸೂಲಿ
ವೈವಾಟ
ಶೌಕ

ಸರಾಸ
ಸವ್ವಾ
ಸವ್ದ
ಸಾಕಳಿ
ಸಾಗೋನಿ
ಹಕನಾಕ
ಹಕಾರಿ
ಹಜಾರ
ಹಮಾಲಿ
ಹೈಗೈ
ಹುಂಡಾ
ಹೊಂಬ
ಹುಡದಿ
ಹುರಹುರ
ಹೌಸಿ
ಹಪ್ಪ್ಯಾಪಿ
ಹರಾಸ
ಅಟಾಪ
ಅಡಮುಟ
ಅಬುರ
ಇನಾಮಂತಿ
ಉತಾರ
ಉಲ್ಪಿ
ಊಭಾರ
ಐಸಾರಾಮ
ಕಜ್ಜಾಳಿ
ಕಡ್ಯಾ / ಖಡ್ಯಾ
ಕನಾ / ಖಣ
ಕಸರು
ಖುನಾ

ಗಚಗಿ
ಗಡಂಚಿ
ಗದಾಡ
ಗಮ್ಮತ
ಚಾಕಾ
ಚೌರಸ್ತಾ
ಛಿನಾಲಿ
ಛತ್ರಿ
ಜೋಪಡಿ
ಜಾಗಾ
ಜೋಲಿ
ಕಫಾರಿ
ಟಾಕಿ
ಟಾಚನಿ
ಟಿಮ್ಮು
ಟಿಕಳಿ
ಡಬ್ಬಣ
ಡುಗುಡುಗಿ
ಡುಬರಿ
ಢೋಲಿ
ತಪರಾಕಿ
ಥಪರಕಿ
ದಬದಬಿ
ಧಗಿ
ದ್ಯಾಸ
ಧಾಪ
ಧಾಮಣಿ
ಧಡಪುಡ
ನಳಾ
ನಾಕಾ

ನೀಕಾಲ
ನ್ಯಾರಿ
ಪಕಳಾ
ಪತ್ತ
ಪನ್ನಾ
ಪಲ್ಪಿ
ಪಾಣಿ
ಪಾವಬಂದ
ಪ್ಯಾಂಟುಣಗಿ
ಪಾವ
ಪಾವಣೆ
ಪಾವಣ್ಯ
ಪಿಸವಿ
ಹುಂಗಿ
ಪುಡಾರಿ
ಬಾವಾ
ಬುಕಣಿ
ಬೋಗೋಣಿ
ಭೋಂಗಾ
ಲಾಡ್ಯಾ
ಮಸಾರಿ
ಮೊಸಿ
ಲಿಗಾಡ
ವಟಗಾ
ವಟಾಳಿ
ವಾಜಮಿ
ವೈನಿ
ಸಪಾಟ
ಸಳೈ
ಸಾಡೆ

ಸ್ವಾಯಿ

**ಉರ್ದು**

ಅಂಗೂರ
ಅಂಜುರ
ಅಂದಾಜ
ಅನಾಜ
ಅಮರಾಯಿ
ಅಮಿನಸಾಬ
ಅವಾಜ
ಆಪಾಸ
ಆರಾಮ
ಆಸಾಮಿ
ಇರಾದಾ / ದಿ
ಇಲಾಜ
ಉಸಾಬರಿ
ಊಟಬೈಟಾಕ
ಊದಕಡ್ಡಿ
ಕಟಾಯಿ
ಕಟಮಸ್ತ
ಕಡಚಿ
ಗಬಾಬ
ಕಮಾನ
ಕಮಾಯಿ
ಕಮಾಲ
ಕಾಟಗಾಯಿ
ಕಾಯಿದೆ
ಕಿತಾಪತಿ
ಕಿರಾಯಿ

ಕಿಲಾಡಿ / ಖಿಲಾಡಿ
ಕುಂಚಿ
ಖುನಸಿ
ಕುರಬಾನಿ
ಖುಲ್ಲಾ
ಖ್ಯಾಲ
ಖಾತರಿ
ಖಾತೆ
ಖಾಲಿ
ಖೊಲ್ಲಿ
ಗಜಲ್
ಗಟಾರ
ಗಡುಪ
ಗಡಬಡಿ
ಗಪ್ಪಚಿಪ್ಪ
ಗಪ್ಪ
ಗಬ್ರು
ಗರು
ಗಲ್ಲಾ
ಗಲ್ಲಿ
ಗಾಂಡು
ಗಾಂಜಾ
ಗಾಡಿ
ಗಾದಿ
ಗಾಬರಿ
ಗುಮ್ಮಟ
ಗೈರಿ
ಘೆರಾವ
ಚಕಮಕಿ
ಚಕ್ಕರ

ಚಟಾಕಾ / ಛಟಾಕ
ಚಡಾವ
ಚಪರಾಸಿ
ಜಮಕ
ಚಮಡಾ
ಚಾಲು
ಚಾವಿ
ಚುಕ್ತಾ
ಚೆಲಾ
ಚೈನಿ
ಜಾಸ್ತಿ
ಠಿಕ
ತಾಯಿತ
ತಾಬೆದಾಗ
ತುರಂತ
ಥೈಲಿ
ದೇಖರೇಕ
ದಂದ್ಯಾ
ಸಕ್ಕಾಮುಕ್ಕಿ
ದಕ್ಕಿ
ಧಾರಣಿ
ಧಾಕ
ಧೋಕಾ
ನಾಪತಾ
ನಾಲಾ
ಪಂಚನಾಮ
ಪಂಚಾತಿ
ಪಗಾರ
ಪತಾ
ಪಯಲೆ

ಪರಾತ
ಪಾವತಿ
ಪಿಚಕಾರಿ
ಪಿಚಾಡಿ
ಪುಕಾರ
ಪುಸಲತ್ತ
ಬಚಾವ
ಬದಲಿ
ಬರಾಬರಿ
ಬಾಗವಾನ
ಬಾದಲಿ
ಬಾರದಾನಿ
ಬಿಲ್ಲಾ
ಬೀಡಾ
ಬೇಸಾನ
ಬೈಠಾಕ
ಭಾನಾಮತಿ
ಭರೋಸಾ
ರಠಬಟಿ
ರಪಾಟೆ
ರೋಕಡಾ
ಲಂಗಡ್ಯಾ
ಲಗಾವ
ಲಡಿ
ಲಿಖಾವಟ
ಸಂಡಾಸ
ಸಮಜಾಸಿ
ಸಾಡೆಸತ್ತಿ
ಸಿದಾಸಾದಾ
ಹಜಾಮತ

ಹರಾಮ
ಅಜವ್ಯಾನ
ಅನಾಮತ್ತ
ಕಬುಲ
ಗಂಜ
ಗರ್ಮಿ
ಗುಗ್ಗು
ಘೋಟಾಳಿ
ಚಪ್ಪಲ
ಚಪಾತಿ
ಚಿಪಾಟಿ
ಚಿಮುಟ್ಗಿ
ಭತ್ತ
ಭಾತಿ
ಛಾಪ್ಪಾ
ಜಟ್ಪನೆ
ಜಟ್ಪಂತ
ಝುಪಾಟಿ
ಟಿಬ್ಬಿ
ಡಬ್ಬಾ
ಡಾಂವ
ಡುಮಕಿ
ಡೋಂಗಿ / ಡಂಗಿ
ತಿಜೋರಿ
ಥೋಡೆ
ದಾಂಧಲಿ
ದಾಮ
ಪಕಳಾ
ಬಟಾಯಿ
ಭರೋಸಾ

ಮೊರಿ

ರಾಂಡಬಾಜ

ಲತಾಡಿ

ಲವಲವ

ಲೂಟಿ

ಶೇಕಡಾ

ಸಸ್ತಾ

ಸೂಟಿ

ಶೇರ

**ಗುಣವಾಚಕಗಳು**

ಅಗಾವ

ಉಜಾಡ

ಉಡಾಳ

ಐಟ

ಐನಾತಿ

ಕಂಗಾಲು

ಕಚ್ಚಾ

ಕಟಾರಾ

ಖಟ್ಟ

ಕಡಕ

ಖಡತರ

ಖಾಸಾ

ಖರ

ಖೋಡಿ

ಖೊಟ್ಟಿ

ಗರಮ

ಗರ್ದಿ

ಗುಮ್ಮ

ಫಾಣ

ಚಲ್ತಿ

ಚೌಕ

ಚೋಟ್ಯಾ

ಜಂಗಲಿ

ಜಂಗಿ

ಜರೂರಿ

ಜಾಬಾದ

ಜರತಾರಿ

ತಿರಸಾಟ

ಥೆಟ

ದಗಲಬಾಜಿ

ದಿವಾನಿ

ದುಸರಾ

ನಿವಾಂತ

ಪಕ್ಕಾ

ಬಾನುಮತಿ

ಬಜಾರಿ

ಬೇವರ್ಸಿ

ಹಲ್ಕಾ

ಅಚಾನಾಕ

ಲಂಬು

ಹಲ್ಕಟ

ಜಬುರ

ಜವಾರಿ

ತಾಜಾ

ಡಗುಳ

ದಿಲದಾರ

ದುರಸ್ತ

ಲುಚ್ಚಾ

ಬರ್ತಿ

**ಸಂಬಂಧವಾಚಗಳು**

**ಮರಾಠಿ**

ಕಾಕಾ, ಕಾಕ

ಕಾಕಿ

ಬಾಬಾ

ವೈನಿ

ದಾದಾ

ಮೌಸಿ

ಆಯಿ

ಭಾವಜಿ

**ಉರ್ದು**

ಭಾಬಿ

ಸಾಲಾ

**ಅವ್ಯಯಗಳು**

**ಮರಾಠಿ**

ಅಗದಿ

ಅಜಾಬಾದ

ಅಪ್ಪಟ

ಆಖರಿ

ಉಡಾಳ

ಉಧೋ

ತಾಬಡತೊಬಡ

ಪುಗಸಟ್ಟೆ

ಬಂಬಳ

ಸರಾಸಿ

**ಉರ್ದು**

ಆರಾಪಾರ

ಎಕಸಾ

ಎಕಾಎಕಿ

ಗಪಚಿಪ

ಗಪ್ಪಾ

ಜಲ್ದಿ

ಬರಾಬರ

ಗಚಕಿ

ಜರ್‍ರನೆ

ಜರಾಕ್ಕನೆ

ವಾಪಸ

**ಅನುಕರಣಾವ್ಯಯಗಳು**

ಅಕರಾಳ ವಿಕರಾಳ(ಮ)

ಅವಡಾ ಸವಾಡ(ಮ)

ಅದಲಿಬದಲಿ (ಉ)

ಆಸಪಾಸ (ಉ)

ಕಟಕಟಿ (ಉ)

ಖಡಾಖಡಿ (ಉ)

ಗಡಬಡ (ಉ)

ಗಪತಿಸ (ಉ)

ಚಕಮಕಿ (ಉ)

ದೇಖದೇಖಿ (ಉ)

ಧಕ್ಕಾಮುಕ್ಕಿ (ಮ)

ಧಾಂಧುಂ (ಉ)

ಹುರಹುರ (ಮ)

ಸಿದಾಸಾದ (ಉ)

**ಪ್ರತ್ಯಯಗಳು**

ಇಯತೆ (ಮ)

ವರಿ (ಮ)

ಪೈಕಿ (ಮ)

ಪೈ (ಉ)
ಬೆ (ಉ)
ಕಿ (ಉ)

## ಕ್ರಿಯಾಪದಗಳು

**–ಇಸು**

ಅಟಕಾಸು
ಅಕಡಾಸು
ಕಮಾಸು
ಖುಲಾಸು
ಚಾಡಾಸು
ಚಮರಾಸು
ಚುಡಾಸು
ಜಟಕಾಸು
ಛಪಾಸು
ಜಿಟಕಾಸು
ಜಡಕಾಸು
ಜಾಣಾಸು
ಜಮಾಸು
ಜುಕಾಸು
ಟಿಕಾಸು
ಟಿಪಾಸು
ಠರಾಸು / ತರಾಸು
ಥಕಾಸು
ದಭಾಸು
ನಿಭಾಸು
ಪಚಾಸು
ಪಾಂಚಾಸು
ಫಸಾಸು
ಬಚಾಸು
ಬಡಾಸು
ಬಿಗಡಾಸು
ಭಡಕಾಸು
ಲಗಾಸು
ಲುಚಾಸು
ವಪರಾಸು / ಪಟಾಸು
ಸಮಜಾಸು
ಪುಸಲಾಸು
ಲಟಾಸು
ರೊಕಾಸ
ಸಂಬಾಳ್ಸು

**– ಮಾಡು**

ಅಗಾವಮಾಡು
ಅಟಕಾಟಮಾಡು
ಬದಲಿಮಾಡು
ಅಡಚಣಮಾಡು
ಅವಾಜಮಾಡು
ಉಲ್ಟಾಮಾಡು
ಖರಾಬಮಾಡು
ಕವಕವಮಾಡು
ಗಡುಪಮಾಡು
ಚೌಕಾಸಿಮಾಡು
ಚುಕ್ತಾಮಾಡು
ತಪಾಸಮಾಡು
ತಾಕಿತಮಾಡು
ದೇಖರೇಖಿಮಾಡು
ಧೋಕಾಮಾಡು
ನಿಗರಾಣಿಮಾಡು
ಪಂಚನಾಮಮಾಡು
ಪಂಚಾತಿಮಾಡು
ಪಾರಮಾಡು
ಬಚಾವಮಾಡು
ಬೈಕಾಕಿಮಾಡು
ವಸೂಲಿಮಾಡು
ಹೈಗೈಮಾಡು
ಆರಾಮಮಾಡು
ಡಂಗಿಮಾಡು
ಧಾಂದಲಿಮಾಡು
ಚಾಲುಮಾಡು
ಪಲ್ಟಿಮಾಡು
ಬಿದಾಯಿಮಾಡು
ಲೂಟಿಮಾಡು
ವಟಾಳಿಮಾಡು

**– ಆಗು**

ಅಟಕಾವಾಗು
ಬದಲಿಆಗು
ಅಡಚಣಾಗು
ಅವಡಾಸವಡಾಆಗು
ಆರಾಮಾಗು
ಕಾರಾರಾಗು
ಗಡುಪಾಗು
ದೋಕಾಆಗು
ಬರ್ತಿಆಗು
ಉಲ್ಟಿಆಗು
ಫಚ್ಚಾಗು
ದ್ಯಾಸಾಗು
ಪಲ್ಟಿಆಗು
ಪಾರಾಗು
ಬಿದಾಯಿಆಗು
ವಟಾಳಿಆಗು

**– ಕೊಡು**

ಅಗಾವಕೊಡು
ಬಟಾಯಿಕೊಡು
ಸೂಟಿಕೊಡು

*** ಹಾಕು**

ಅವಾಜಹಾಕು
ಕರಾರಹಾಕು
ಗೊಂದಲಹಾಕು
ಘೇರಹಾಕು
ಠಿಕಾಣಿಹಾಕು
ಧಮಕಿಹಾಕು
ಹುಡದಿಹಾಕು
ಟಾಕಿಹಾಕು
ಪಲ್ಟಿಹಾಕು

**–ಇರು**

ಅಗಾವ ಅದಾ
ಉಲ್ಟಾ ಅದಾ
ಆರಾಮ ಅದಾ
ಚಾಲುಅದಾ
ಅಡಚಣದಾ
ಉಲ್ಟಾದಾ
ನೀಗಾದಾ
ಬರಾಬರದಾ
ಡಂಗಿದಾ

**–ಇಡು**

ಖುನಸಿ ಇಡು

| | | |
|---|---|---|
| ಠೇವಣಿ ಇಡು | **– ಬಿಳು** | **–ತೊಗೊ** |
| ನೀಗಾಇಡು | ಪಲ್ಪಿಬಿಳು | ತಪಾಸತೊಗು |
| ಪಂಚಾತಿಇಡು | ಉಲ್ಪಾಬಿಳು | * ಸೂಚಿಬಿಡು |
| **–ಹೇಳು** | ಪರಾಕಬಿಳು | * ಠಿಕಾಣಿಹುಡು |
| ಥಾಡಿಹೇಳು | ಅರಪಾರಬಿಳು | |
| ಭಮಚಿಹೆಳು | | |
| ಲಿಗಾಡಹೇಳು | | |

---

**ಸಂಖ್ಯಾವಾಚಕಗಳು**

| ಮರಾಠಿ | ಬಿಸ | ಚಾಳಿಸ | ಸಾಟ |
|---|---|---|---|
| ಎಕ | ಎಕವಿಸ | ಎಕ್ಕೆಚಾಳಿಸ | ಎಕಸ್ಪ |
| ದೋನ | ಬಾವಿಸ | ಬೆಚಾಳಿಸ | ಭಾಸಸ್ಪ |
| ತಿನ | ತೆವಿಸ | ತ್ರೆಚಾಳಿಸ | ತ್ರೆಸಸ್ಪ |
| ಚಾರ | ಚೌವಿಸ | ಚೌರೆಚಾಳ | ಚೌಸಸ್ಪ |
| ಪಾಂಚ | ಪಂಚವಿಸ | ಪಂಚೆಚಾಳ | ಪಂಚಸಸ್ಪ |
| ಸಹಾ | ಸಬ್ಬಿಸ | ಛಚಾಳ | ಶಾಸಸ್ಪ |
| ಸಾತ | ಸತ್ರಾವಿಸ | ಸತ್ತೆಚಾಳ | ಸತ್ತೆಸಸ್ಪ |
| ಆಟ | ಅಟ್ಠಾವಿಸ | ಅಟ್ಠೆಚಾಳ | ಅಟ್ಠೆಸಸ್ಪ |
| ನೌ | ಎಕ್ಕೋಣಿತಿಸ | ಎಕ್ಕೊಣಪನ್ನಾಸ | ಎಕೊಣಸತ್ತರ |
| ದಹ | ತಿಸ | ಪನ್ನಾಸ | ಸತ್ತರ |
| ಅಕ್ರಹ | ಎಕತಿಸ | ಎಕ್ಕಾವನ | ಎಕ್ಕತ್ತರ |
| ಬಾರಾಹ | ಬತ್ತಿಸ | ಬಾವನ | ಬಾಹತ್ತರ |
| ತೆರಾಹ | ತೆತ್ತಸ | ತ್ರೆಪನ್ನ | ತ್ರೆಹತ್ತರ |
| ಚೌದಾಹ | ಚೌತಿಸ | ಚೌಪನ್ನ | ಚೌರೆತ್ತರ |
| ಪಂದ್ರಾಹ | ಪಸತಿಸ | ಪಂಚಾವನ | ಪಂಚೆತ್ತರ |
| ಸೊಳಾಹ | ಛತ್ತಿಸ | ಛಾವನ | ಸಾಹತ್ತರ |
| ಸತ್ರಾಹ | ಸದೋತಿಸ | ಸತ್ತಾವನ | ಸತ್ಯತ್ತರ |
| ಅಟ್ರಹ | ಅಡೊತಿಸ | ಅಟ್ಠಾವನ | ಆಟ್ಯಾತ್ತರ |
| ಎಕ್ಕೋಣಿಸ | ಎಕ್ಕೊಣಚಾಳಿಸ | ಎಕ್ಕೊನ್ನಸ್ಪ | ಎಕೊಣಅಂಶಿ |

ಐಂಸಿ
ಎಕ್ಯೈಂಸಿ
ಬ್ಯಯ್ಯೈಂಸಿ
ತ್ರೆಯಂಸಿ
ಚಾರ್ಯೈಂಸಿ
ಪಂಚ್ಯೈಂಸಿ
ಶಾಯ್ಯೈಂಸಿ
ಸತ್ಯೈಂಸಿ
ಅಟ್ಯೈಂಸಿ
ಎಕ್ಕೊಣನವದ
ನವದ
ಎಕ್ಯಾನೌ
ಬ್ಯಾನೌ
ತ್ರ್ಯೆಂಣಾ
ಚೌರ್ಯಣೌ
ಪಂಚಾಣೌ
ಶಾಣೌ
ಅಟ್ಟಣೌ
ನೌವ್ಯಸೌ
ಸೆಂಬೊರಿ
ಪಾನಸೊ
ಹಜಾರ

ಉರ್ದು

ಎಕ
ದೊ
ತಿನ
ಚಾರ
ಪಾಂಚ
ಛೆ
ಸಾತ
ಆಟ
ನೌ
ದಸ
ಗ್ಯಾರಹ
ಬಾರಾ
ತೆರಾ
ಚೌದಾ
ಪಂದ್ರಾ
ಸೊಳಾ
ಸತ್ರಾ
ಅಟ್ರ
ಉನ್ನಿಸ / ವನ್ನಿಸ
ವಿಸ
ಎಕ್ಕಿಸ
ಬಾವಿಸ
ತೆವಿಸ
ಚೌವಿಸ
ಪಂಚಿಸ
ಛೆಬ್ಬಿಸ
ಸತ್ತಾವಿಸ
ಅಟ್ಟಾವಿಸ
ಉನ್ನತಿಸ
ತಿಸ
ಎಕತಿಸ
ಬತ್ತಿಸ
ತೆತ್ತಿಸ
ಚೌತಿಸ
ಪಸತಿಸ
ಛತ್ತಿಸ
ಸತ್ತಿಸ
ಅಡತಿಸ
ಉನ್ನತಾಳಿಸ
ಚಾಲಿಸ
ಎಕತಾಲಿಸ
ಬೆತಾಳಿಸ
ತೆರತಾಲಿಸ
ಚೌತಾಳಿಸ
ಪಸತಾಳಿಸ
ಛೆತ್ತಾಳಿಸ
ಸತ್ತಚಾಳಿಸ
ಅಟ್ಟೆಚಾಲಿಸ
ಉನ್ನೆಪನ್ನಾಸ
ಪನ್ನಾಸ
ಎಕ್ಕಾವನ
ಬಾವನ
ತ್ರಿವನ
ಚೌಪನ
ಪಚಪನ
ಛಪನ್ನ
ಸತ್ತಾವನ
ಅಟ್ಟಾವನ
ಉನ್ನಸಾಟ
ಸಾಟ
ಎಕಸಾಟ
ಬಾಸಾಟ
ತಿರಸಾಟ
ಚೌಸಾಟ
ಪೈಂಸಾಟ
ಸಾಸಷ್ಟ
ಸತ್ತಸಟ
ಅಡಸಟ
ಉನ್ನಐಂಸಿ
ಐಂಸಿ
ಎಕ್ಯೈಂಸಿ
ಬ್ಯಾಐಂಸಿ
ತ್ರೆಯಂಸಿ
ಚಾರ್ಯೈಂಸಿ
ಪಂಚ್ಯೈಂಸಿ
ಛಿಯಾಂಸಿ
ಸತ್ಯೈಂಸಿ
ಅಟ್ಯೈಂಸಿ
ಉನ್ನೈನವದ
ನವದ
ಎಕ್ಯಾಣಾ
ಬ್ಯಾಣೌ
ತ್ರೆಣೌ
ಚೌರ್ಯೆಣೌ
ಪಂಚಾಣೌ
ಛಿಯಾಣೌ
ಸತ್ಯಾಣೌ
ಅತ್ಯಣೌ
ಸೌವ್ಯಸೌ
ಸೌ
ಪಾಸ ಸೆ
ಹಜಾರ

# ಪರಾಮರ್ಶನ ಗ್ರಂಥಗಳು

ಅರೋರಾ ಎಸ್. ಲಕ್ಷ್ಮೀನಾರಾಯಣ, ೧೯೮೩, ***ಅನ್ಯ ಭಾಷೆಗಳ ಮೇಲೆ ಕನ್ನಡದ ಪ್ರಭಾವ***, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ಎಂಡ್ರೋನೊವ್ ಎಮ್.ಎಸ್. ೨೦೦೪, ***Dravidian language***, ವಿಶಾಲಾಂಧ್ರ ಪಬ್ಲಿಷಿಂಗ ಹೌಸ, ವಿಜಯವಾಡಾ.

ಕನ್ನಡ ನಿಘಂಟು ಸಂಪಾದಕ ಸಮಿತಿ (ಪ್ರ.ಸಂ) ೨೦೧೦, (ಎರಡನೇ ಮು.) ***ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು***– ೧ ರಿಂದ ೮ ಸಂಪುಟಗಳು, ಕ.ಸಾ.ಪ. ಚಾಮರಾಜಪೇಟೆ, ಬೆಂಗಳೂರು.

ಕೃಷ್ಣರಾವ್ ಕೆ.ಎಂ., ೧೯೭೪, (ಪ್ರಮು.೧೯೬೮), ***ಕನ್ನಡ ಭಾಷಾ ಸ್ವರೂಪ***, ಉಷಾ ಸಾಹಿತ್ಯಮಾಲೆ, ಮೈಸೂರು.

ಕೃಷ್ಣಯ್ಯ ಎಂ.ಎಚ್., ೨೦೧೨ (ಪ್ರಮು.೧೯೯೩), ***ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ***, ಲಿಖಿತ ಪುಸ್ತಕ ಗಾಂಧಿಬಜಾರ್, ಬಸವನಗುಡಿ ಬೆಂಗಳೂರು.

ಕಾಸಿವಾಲಿ, ೨೦೦೬ ***Marathi***, ಇಂಡಿಯನ್ ಇನಸ್ಟಿಟೂಟ್ ಆಫ್ ಲಾಂಗ್ವೆಜ್ ಸ್ಟಡಿಸ್, ದೆಹಲಿ.

ಕೇದಿಲಾಯ ಶಂಕರ ಎ., ೧೯೭೦, ***Foreign lone word in Kannada (Arabic and Persian)***, ಯುನಿವರ್ಸಿಟಿ ಆಫ್ ಮದ್ರಾಸ, ಮದ್ರಾಸ.

ಕಾಡದೇವರಮಠ ಎಲ್.ಎಸ್., ***ಕನ್ನಡ ಭಾಷಾಧ್ಯಯನ***, ವಿಧ್ಯಾನಿಧಿ ಪ್ರಕಾಶನ, ಗದಗ.

ಕೋಡಗುಂಟಿ ಬಸವರಾಜ (ಸಂ.), ೨೦೧೦, ***ಭಾಷಾ ವಿಶ್ಲೇಷಣೆ***, ಭಂಢಾರ ಪ್ರಕಾಶನ, ಮಸ್ಕಿ.

ಗಂಗಾನಾಯಕ್ ಕೆ.ಎನ್., ೨೦೧೨, ***ಕನ್ನಡದಲ್ಲಿ ಅನ್ಯಭಾಷಾ ಪದನಿಷ್ಪತ್ತಿ ಕೋಶ*** ಸಂಪುಟ ೧–೨, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿ.ವಿ. ಮಾನಸಗಂಗೋತ್ರಿ, ಮೈಸೂರು.

ಚಿದಾನಂದಮೂರ್ತಿ ಎಂ., ೨೦೧೨(ಹನ್ನೊಂದನೆ ಮು. ಪ್ರಮು. ೧೯೬೫), ***ಭಾಷಾವಿಜ್ಞಾನದ ಮೂಲ ತತ್ವಗಳು***, ಡಿ.ವಿ.ಕೆ. ಮೂರ್ತಿ, ಪ್ರಕಾಶನ, ಮೈಸೂರು.

ಝುವೆಲ್‌ಬಿಲ್ ವಿ. ಕಮಿಲ್, ೧೯೯೮, ***Dravidian linguistics an introduction***, ಪಾಂಡಿಚೇರಿ ಇನಸ್ಟಿಟೂಟ್ ಆಫ್ ಲಿಂಗ್ವಿಸ್ಟಿಕ ಅಂಡ ಕಲ್ಚರ ಪಾಂಡಿಚೇರಿ.

ಧಾರವಾಡಕರ್ ರಾ.ಯ., ೧೯೯೮ (ಪರಿಷ್ಕೃತ ಎಂಟನೇ ಮು.) ***ಕನ್ನಡ ಭಾಷಾಶಾಸ್ತ್ರ***, ಗೀತಾಬುಕ್ ಹೌಸ್, ಮೈಸೂರು.

ನಾಗಭೂಷಣ ಗಿತಾ, ೨೦೦೫ (ದ್ವಿಮು), ***ಬದುಕು,*** ಲೊಹಿಯಾ ಪ್ರಕಾಶನ, ಬಳ್ಳಾರಿ

ನಾಗರಾಜಯ್ಯ ಹಂಪ., ೧೯೬೮, ***ಭಾಷಾವಿಜ್ಞಾನ,*** ಡಿ.ವಿ.ಕೆ. ಮೂರ್ತಿ ಪ್ರಕಾಶಕರು ಮೈಸೂರು.

ನಾರಾಯಣ ಕೆ.ವಿ., ೧೯೯೯, ***ದ್ವಿಭಾಷಿಕತೆ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

———, ೨೦೧೦, ***ತೊಂಡು ಮೇವು,*** ಕಂತೆ ೫ ಮತ್ತು ೬, ಬರಹ ಪಬ್ಲಿಸಿಂಗ ಹೌಸ. ಬೆಂಗಳೂರು.

ಬಟ್ ಡಿ.ಎನ್.ಎಸ್., ೧೯೯೫, ***ಕನ್ನಡ ಭಾಷೆಯ ಕಲ್ಪಿತ ಚರಿತ್ರೆ,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

———, ೨೦೦೩, ***ಕನ್ನಡ ಸರ್ವನಾಮಗಳು,*** ಭಾಷಾ ಪ್ರಕಾಶನ, ಮೈಸೂರು

———, ೨೦೦೭, ***ಕನ್ನಡ ನುಡಿ ನಡೆದು ಬಂದ ದಾರಿ,*** ಭಾಷಾ ಪ್ರಕಾಶನ, ಹೆಗ್ಗೋಡು, ಸಾಗರ.

———, ೨೦೧೦, (ಪರಿಷ್ಕೃತ ಮು. ಮುದ್ರಣ), ***ಕನ್ನಡ ಪದಗಳ ಒಳ ರಚನೆ,*** ಬಾಶಾ ಪ್ರಕಾಶನ, ಗಡಿಗಲ್ಲು, ಕೊಪ್ಪ.

———, ೨೦೧೦, ***ಕನ್ನಡ ಬರಹದ ಸೊಲ್ಲರಿಮೆ–೧,*** ಬಾಶಾ ಪ್ರಕಾಶನ, ಹೆಗ್ಗೋಡು, ಸಾಗರ.

———, ೨೦೧೧, ***ಕನ್ನಡ ಬರಹದ ಸೊಲ್ಲರಿಮೆ–೨,*** ಬಾಶಾ ಪ್ರಕಾಶನ, ಬಿಲ್ಲೇಶರ, ಹುಂಚ.

———, ೨೦೧೨, ***ಕನ್ನಡ ಬರಹದ ಸೊಲ್ಲರಿಮೆ–೩,*** ಬಾಶಾ ಪ್ರಕಾಶನ, ಹೆಗ್ಗೋಡು, ಸಾಗರ.

ಬಿಳಿಗಿರಿ ಎಚ್.ಎಸ್., ೧೯೯೫, ***ವರಸೆಗಳು,*** ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು.

ಮಹಾದೇವನ್ ಆರ್., ೧೯೬೮, **Gulbarga kannada** *(brahamana dialect)*, ಡೆಕ್ಕನ ಕಾಲೇಜ್, ಪುನೆ.

ರಾಜಪುರೋಹಿತ ಬಿ.ಬಿ., ೨೦೧೨, ***ಭಾಷಾವಿಜ್ಞಾನ, ತತ್ವ*** ಇತಿಹಾಸ ಮತ್ತು ಅನುಷ್ಟಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ರಾಮಚಂದ್ರರಾವ್ ಬಿ., ೧೯೪೮, ***ಕನ್ನಡ ಭಾಷೆಯ ಇತಿಹಾಸ,*** ಡಿ.ವಿ.ಕೆ. ಮೂರ್ತಿ ಪ್ರಕಾಶಕರು ಮೈಸೂರು.

———, ೧೯೮೩, ***ಕನ್ನಡ ಭಾಷೆ ಹುಟ್ಟು ಮತ್ತು ಬೆಳವಣಿಗೆ,*** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ರೂಥ ಲೈಲಾ ಸ್ಕಾಮಿಡ್ತ, ೧೯೮೧, **Dakhani Uradu** *(history and structure),* ಯು.ಎಸ್. ಬಾಹರಿ ಪಬ್ಲಿಕೇಷನ್ ಪ್ರೈ. ಲಿ. ಇಂದ್ರಪುರಿ, ದೇಹಲಿ.

ವೆಂಕಟಸುಬ್ಬಯ್ಯ ಜಿ. ೨೦೧೧, ***ಎರವಲು ಪದಕೋಶ,*** ನವಕರ್ನಾಟಕ ಪ್ರಕಾಶನ, ಬೆಂಗಳೂರು.

ವೆಂಕಟೇಶ ಮಲ್ಲೆಪುರಂ ಜಿ. (ಸಂ.), ***ಶಂಬಾ ಕೃತಿ*** ಸಂಪುಟ-೧ ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜಪೇಟೆ, ಬೆಂಗಳೂರು.

ಶಿವಾನಂದ ವಿ. ೧೯೮೧, ***ಭಾಷಾ ವೈಜ್ಞಾನಿಕ ನೆಲೆಯಲ್ಲಿ ಪದಗಳ ಚರಿತ್ರೆ,*** ಧ್ವನಿ-ಪ್ರತಿಮಾ ಪ್ರಕಾಶನ, ಗುಲಬರ್ಗಾ

———, ೧೯೯೯, ***ತೌಲನಿಕ ದ್ರಾವಿಡ ಭಾಷಾ ವಿಜ್ಞಾನ,*** ವಿಧ್ಯಾನಿಧಿ ಪ್ರಕಾಶನ, ಗದಗ.

ಶ್ರೀಧರ ಎಸ್. ಎನ್., ೨೦೧೧ (ಮೂ.ಮು), ***ಇಂದಿನ ಕನ್ನಡ ರಚನೆ ಮತ್ತು ಬಳಕೆ,*** ಅಭಿನವ ಪ್ರಕಾಶನ, ಬೆಂಗಳೂರು.

ಸಂಗಮೇಶ ಸವದತ್ತಿಮಠ, ೧೯೯೯, ***ಭಾಷಾ ಲೇಖ,*** ರೂಪರಶ್ಮಿ ಪ್ರಕಾಶನ, ಗುಲಬರ್ಗಾ.

ಸಾಂಬಮೂರ್ತಿ, ೨೦೦೬, ***ಕನ್ನಡದಲ್ಲಿ ಪ್ರತ್ಯಯಗಳು,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

———, ೨೦೧೦, ***ಕನ್ನಡ ಕ್ರಿಯಾ ರಚನೆ-ಬಗೆಗಳು,*** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

